# ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)

ನೋಂದಣಿ ಸಂಖ್ಯೆ: ೧೬೦೧೦೨೦೩೦೦೦೧



ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೬-೧೭

# ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)



ನೋಂದಣಿ ಸಂಖ್ಯೆ: ೧೬೦೧೦೨೦೩೦೦೦೧




ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೬-೧೭

# ಪರಿವಿಡಿ

# ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ ಮತ್ತು ಸಮೀಕ್ಷೆ

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ ಮತ್ತು ಸಮೀಕ್ಷೆ

## ಪ್ರಸ್ತಾವನೆ

ನಮ್ಮ ವೈಯಕ್ತಿಕವಾದ ಆಸ್ತಿಗೆ ಅನ್ಯರಿಂದ ಅಥವಾ ಇನ್ನಿತರ ಶಕ್ತಿಗಳಿಂದ ಧಕ್ಕೆಯಾದರೆ ಅದನ್ನು ತಕ್ಷಣವೇ ತೀವ್ರವಾಗಿ ಪ್ರತಿರೋಧಿಸುತ್ತೇವೆ. ಅದೇ ಸಾರ್ವಜನಿಕ ಆಸ್ತಿಯಾದರೆ ಅದು ನಮಗೆ ಸಂಬಂಧಿಸಿದ್ದಲ್ಲ ಎಂಬ ಉದಾಸೀನತೆ, ಉತ್ಪ್ರೇಕ್ಷೆ ತೋರಿಸುವುದು ನಮ್ಮ ಜನರ ದೌರ್ಬಲ್ಯವಾಗಿದೆ.

ದೇಶ, ಧರ್ಮ, ಜಾತಿ, ಭಾಷೆ, ಬಣ್ಣ ಯಾವುದೇ ಇದ್ದರೂ ಇಬ್ಬರು ಅಪರಿಚಿತರ ನಡುವೆ ಮಾತುಕತೆ ಪ್ರಾರಂಭವಾಗುವುದೇ ನಿಮ್ಮ ಹೆಸರೇನು? ಎಂದು ಕೇಳುವ ಮೂಲಕ ಈ ಪ್ರಶ್ನೆಗೆ ಉತ್ತರ ಸಿಕ್ಕಿದ ಕೂಡಲೇ ನಂತರದ ಪ್ರಶ್ನೆ ನಿಮ್ಮ ಊರು ಯಾವುದು? ಎಂದು ಹೀಗೆ ಪರಸ್ಪರರ ನಡುವೆ ಪ್ರಶ್ನೆಗೆ ಉತ್ತರ ಸಿಕ್ಕಿದ ಕೂಡಲೇ ನಂತರ ಮಿಕ್ಕೆಲ್ಲಾ ಸಾಮಾಜಿಕ ವ್ಯವಹಾರದ ಮಾತುಕತೆಗಳು ಜರುಗುತ್ತವೆ.

ಈ ಎರಡು ಸಂಗತಿಗಳನ್ನು ಪ್ರಸ್ತಾಪಿಸಲು ಕಾರಣ ಇಷ್ಟೆ, ವ್ಯಕ್ತಿನಾಮ, ಕುಟುಂಬನಾಮ, ಗ್ರಾಮನಾಮಗಳಲ್ಲಿ ಅತ್ಯಧಿಕವಾಗಿ ರೂಪಾಂತರ ನಾಮಾಂತರ ಕ್ರಿಯೆಗೆ ಒಳಗಾಗಿರುವುದು ಮಾತ್ರ ಗ್ರಾಮನಾಮ ಅಥವಾ ಸ್ಥಳನಾಮವಾಗಿದೆ. ಸ್ಥಳನಾಮಗಳು ನಮ್ಮ ವೈಯಕ್ತಿಕವಾದ ಆಸ್ತಿಯಾಗಿರದೆ ಸಮಾಜ ಆಸ್ತಿಯಾಗಿದೆ. ಉಳಿದ ನಾಮಗಳಿಗಿಂತಲೂ ಗ್ರಾಮನಾಮ, ಸ್ಥಳನಾಮ ಜನರ ಬಾಯಲ್ಲಿ ಹೆಚ್ಚು ವ್ಯವಹರಿಸುವುದರಿಂದ ಈ ಅಧಿಕ ವ್ಯತ್ಯಾಸಕ್ಕೆ ಮುಖ್ಯ ಕಾರಣವಾಗಿದೆ. ಹೀಗೆ ಸ್ಥಳನಾಮಗಳು ರೂಪದೃಷ್ಟಿಯಿಂದ ಅಧಿಕ ವ್ಯತ್ಯಾಸಕ್ಕೆ ಗುರಿಯಾಗಿ ತನ್ನ ನಿಜ ಅರ್ಥವನ್ನು ಕಳೆದುಕೊಂಡಿರುವುದರಿಂದ ಸಹಜವಾಗಿಯೇ ಕಳೆದುಕೊಂಡು ನಿಜ ಅರ್ಥವನ್ನು ಹುಡುಕುವ ಕುತೂಹಲ ಕೆರಳಿಸುವುದು ಸಹಜವಾಗಿದೆ. ಅಲ್ಲದೆ ಹೆಸರುಗಳು ಬಹುಪಾಲು ಅರ್ಥಗರ್ಭಿತವಾದವುಗಳು. ಹೆಸರು ವ್ಯಕ್ತಿಯಾಗಿರಬಹುದು, ಊರಿನವರಾಗಿರಬಹುದು ಅದು

ಮನುಷ್ಯ ಜೀವನದ ಪರ್ಯಾಯದಲ್ಲಿ ವ್ಯವಹಾರದಲ್ಲಿ ವಹಿಸುವ ಪಾತ್ರ ಮಾತ್ರ ಮಹತ್ತರವಾದುದ್ದಾಗಿದೆ. ಹೆಸರುಗಳು ಜೀವನದ ಅವಿಭಾಜ್ಯ ಅಂಗಗಳಾಗಿವೆ ಎಂಬುದರಲ್ಲಿ ಸಂಶಯವೇ ಇಲ್ಲ.

ಸಮುದಾಯಗಳು ಆರಂಭದಲ್ಲಿ ಪ್ರಾಕೃತಿಕ ಪರಿಸರದ ಚಹರೆಯೊಂದಿಗೆ ತಮ್ಮ ನೆಲೆಗಳಿಗೆ ಹೆಸರುಗಳನ್ನು ಕರೆದುಕೊಂಡರು. ಬೆಟ್ಟ, ಗುಡ್ಡ, ಮರ, ಕಲ್ಲು ಇವುಗಳ ಗಾಢ ಸಂಬಂಧವೂ ಹೆಸರುಗಳಿಗೆ ಪ್ರವೇಶಿಸಿರಬೇಕು. ಹೆಚ್ಚಾಗಿ ಸಮುದಾಯಗಳು ವಾಸಿಸುತ್ತಿದ್ದು, ಬೆಟ್ಟಗಳ ಅಂಚಿನಲ್ಲಿ ದಿನ್ನೆ ಪ್ರದೇಶಗಳಲ್ಲಿ ಮತ್ತು ತಮಗೆ ಅಗತ್ಯವಾಗಿ ಬೇಕಾದಂತಹ ನೀರಿನ ತಾಣಗಳಲ್ಲಿ ಜಗತ್ತಿನ ಬಹುತೇಕ ಪ್ರಾಚೀನ ನಾಗರೀಕತೆಗಳು ಆರಂಭವಾದದ್ದು ನದಿದಂಡೆಯ ಮೇಲೆ ಎಂಬುದನ್ನು ಗಮನಿಸಿದರೆ ಸಮುದಾಯಗಳ ನೆಲಸುವಿಕೆಯ ಆಯ್ಕೆಯು ಸ್ಪಷ್ಟವಾಗಿ ಗೋಚರಿಸುತ್ತದೆ. ಅಂತೆಯೇ ಪಶುಪಾಲನೆ ಮತ್ತು ಕುರಿಸಾಕಾಣಿಕೆಯು ಬೆಟ್ಟಗಳಲ್ಲಿ, ಬೆಟ್ಟದ ಬದಿಯಲ್ಲಿ ಅನುಕೂಲಕರವಾಗಿತ್ತು. ಆ ವೃತ್ತಿಯೊಂದಿಗೆ ತಮ್ಮ ವಾಸದ ನೆಲೆಗಳನ್ನು ಅಲ್ಲಲ್ಲಿಯೇ ನಿರ್ಮಿಸಿಕೊಂಡರು. ಆ ಕಾರಣದಿಂದಾಗಿ ನಿಸರ್ಗದ ಗಾಢವಾದ ಸಂಬಂಧದೊಂದಿಗೆ ತಳುಕು ಹಾಕಿಕೊಂಡು ಮಾನವನು ಆರಂಭಿಕ ಹಂತದಲ್ಲಿ ಪ್ರಕೃತಿಯ ನಿಷ್ಠೆ ಗ್ರಾಮನಾಮಗಳ ಉದಯಕ್ಕೆ ನಾಂದಿಯಾಯಿತು. ಹೀಗೆ ಗ್ರಾಮ ಸಮಾಜಗಳು ಆರಂಭವಾದವು. ಗ್ರಾಮಗಳಿಗೆ, ಸ್ಥಳಗಳಿಗೆ ಹೆಸರಿಡುವಾಗ ತಮ್ಮ ಜನಾಂಗ, ಅಥವಾ ತಮ್ಮ ಜನಾಂಗದ ವ್ಯಕ್ತಿಗಳ ಚಾರಿತ್ರಿಕ ವ್ಯಕ್ತಿಗಳ, ಧಾರ್ಮಿಕ ವ್ಯಕ್ತಿಗಳ ಹೆಸರುಗಳನ್ನು ಕೊಡಲು ಮುಂದಾದ್ದು ಗ್ರಾಮನಾಮಗಳ ಇತಿಹಾಸದಿಂದ ತಿಳಿಯುತ್ತದೆ.

ಮುಂದೆ ಅದು ಕಾಲಾನಂತರದ ಬದಲಾವಣೆ, ಆಯಾ ಕಾಲದ ಸಮಕಾಲೀನ ಸಾಮಾಜಿಕ ಜೀವನವನ್ನು ಅವಲಂಬಿಸಿ ಹೆಸರಿಡುವಿಕೆಯು ಸ್ಥಿತ್ಯಂತರಕೊಳ್ಳಗಾಯಿತು. ಗ್ರಾಮ ಸಮುದಾಯಗಳು ಆರಂಭದಲ್ಲಿ ನಿಸರ್ಗವಾಚಿಯೊಂದಿಗೆ ಹೆಸರುಗಳನ್ನು ಕರೆದುಕೊಂಡು ಕ್ರಮೇಣ ಜನಾಂಗವಾಚಿ, ವ್ಯಕ್ತಿವಾಚಿಕ ಮುಂತಾದವು. ಈ ಮೂರು ಕಾಲಘಟ್ಟದಲ್ಲಿ ಒಂದು ಸ್ಥಳಕ್ಕೆ ಹೆಸರಿಡುವ ಕ್ರಮದಲ್ಲಿ ಅನೇಕ ಬಗೆಯ ಬದಲಾವಣೆಗಳಾದವು. ಈ ಬದಲಾವಣೆಯ ನಡುವಿನ ಅಂತರದಲ್ಲಿ ಸಾಂಸ್ಕೃತಿಕ ಸಂಪ್ರದಾಯಗಳ ವಿಕಾಸದ ಹಾದಿಯನ್ನು ಕಂಡುಕೊಳ್ಳಬಹುದು. ಒಂದೊಂದು ಗ್ರಾಮ ಒಂದೊಂದು ಸಂಸ್ಕೃತಿಯನ್ನು ತನ್ನಲ್ಲಿ ಅಡಗಿಸಿಕೊಂಡಿರುತ್ತದೆ.

ಸ್ಥಳನಾಮಗಳು ಸಂಸ್ಕೃತಿ ಅಧ್ಯಯನದ ಪ್ರಮುಖ ಆಕರಗಳಲ್ಲಿ ಒಂದಾಗಿದೆ. ಒಂದು ಹೆಸರಿನಲ್ಲಿ ಒಂದು ಜೀವನಕ್ರಮದ ಚರಿತ್ರೆಯಿರುತ್ತದೆ ಎಂಬುದನ್ನು ಗಮನಿಸಬೇಕು. ಅಂದರೆ ನೇರವಾಗಿ ಜೀವನಕ್ರಮದ ಸಂಗತಿಗಳನ್ನು ಹೇಳುವುದಿಲ್ಲವಾದರೂ ಅದರ ಒಟ್ಟಂದವನ್ನು ಪರೋಕ್ಷ ನೆಲೆಯಲ್ಲಿ ತೆರೆದು ತೋರಿಸುವ ಮೂಲಾಧಾರಗಳಾಗಿ ನಾಮಗಳು ಮಹತ್ವದ ಪಾತ್ರವಹಿಸುತ್ತವೆ. ನಮ್ಮ ಅತ್ಯಂತ ನಿಕಟ ಸಂಬಂಧವನ್ನೊಂದಿದ ಸ್ಥಳನಾಮಗಳಿಂದ ವಿಭಿನ್ನ ಬಗೆಯ ಸಾಂಸ್ಕೃತಿಕ ಚಹರೆಗಳನ್ನು ಗುರುತಿಸಲು ಸಾಧ್ಯವಾಗುತ್ತದೆ.

ಆರಂಭಕಾಲದ ಹಟ್ಟಿ, ಹಂಡಿ, ಬಾಡ, ಹಾಳ್ ಈ ನಾಡಿನ ಗೋವಳರು, ಕುರುಬರು, ಹಟ್ಟಿಕಾರರು, ಗೌಡರ ಮೂಲನೆಲೆಗಳೆಂದು ಶಂಭಾ ಜೋಶಿಯವರು ಅಭಿಪ್ರಾಯಪಡುತ್ತಾರೆ. ಗ್ರಾಮಗಳು ಒಂದು ಕಾಲಕ್ಕೆ ಪ್ರಾಮುಖ್ಯತೆಯನ್ನು ಪಡೆದು ಪಟ್ಟಣಗಳಾಗಿಯೋ, ರಾಜಧಾನಿಗಳಾಗಿಯೋ, ಸಾಂಸ್ಕೃತಿಕ ಕೇಂದ್ರಗಳಾಗಿಯೋ ಮೆರೆದ ಪ್ರದೇಶಗಳು ಮತ್ತೊಂದು ಕಾಲಕ್ಕೆ ನೆಲಕಚ್ಚಿ ವಿಘಟನೆಗೊಂಡು ಬೂದಿ ಗುಡ್ಡೆಗಳಾಗಿಯೋ, ಹಾಳೂರುಗಳಾಗಿಯೋ ಉಳಿದು ಗತಕಾಲದ ಸತ್ಯಗಳನ್ನು ತಮ್ಮ ಗರ್ಭದಲ್ಲಿ ಅಡಗಿಸಿಕೊಂಡಿರುತ್ತವೆ.

ಸ್ಥಳನಾಮಗಳು ಒಂದೊಂದು ಊರಿನ ಪರಂಪರೆಯ ವೈಶಿಷ್ಟ್ಯ ಮತ್ತೊಂದು ಪ್ರಾಮುಖ್ಯತೆಗಳನ್ನು ತಿಳಿಸುತ್ತವೆ. ನೆಲ, ಜಲ, ಭಾಷೆ, ಸಂಸ್ಕೃತಿ, ಪ್ರಕೃತಿ, ಭೂಗೋಳ, ಚರಿತ್ರೆ, ಇತಿಹಾಸ, ಆಡಳಿತ, ರಾಜಕೀಯ, ಯುದ್ಧ, ಮತಧರ್ಮ, ಕುಲಕಸುಬು, ಜನಾಂಗ, ಆಚಾರ–ವಿಚಾರ, ಸಮೃದ್ಧಿ ಅರಿವು ಸ್ಥಳನಾಮಗಳ ಅಧ್ಯಯನದಿಂದ ಉಂಟಾಗುತ್ತದೆ. ಹಾಗಾಗಿಯೇ ಸ್ಥಳನಾಮಗಳ ಅಧ್ಯಯನ ಮೇಲುನೋಟಕ್ಕೆ ಒಂದು ಸಾಮಾನ್ಯ ವಿಷಯವಾಗಿ ಕಂಡರೂ ಆಳಕ್ಕೆ ಇಳಿಯುತ್ತಾ ಹೋದಂತೆ ವಿಸ್ತಾರವಾಗುತ್ತಾ ಹೋಗುವ ಕುತೂಹಲಕರ ಅಂಶವನ್ನು ಇಲ್ಲಿ ನೋಡಬಹುದು.

ಒಂದು ಹೂವಿನಲ್ಲಿ ರೂಪ, ಗಂಧ, ಪರಿಮಳ ಆಕಾರ ಇರುವಂತೆ ಗ್ರಾಮದ ನಾಮಗಳಲ್ಲಿ ಅನೇಕ ಪೂರಕ ಮಾಹಿತಿಗಳು ದೊರೆಯುತ್ತವೆ. ಒಂದು ಗ್ರಾಮದ ಹೆಸರಿನಲ್ಲಿ ಏನಿಲ್ಲವೆಂದರೂ ಹೂವಿನಲ್ಲಡಗಿರುವ ಪರಿಮಳದಂತೆ, ಚಂದನದ ಸುವಾಸನೆಯಂತೆ ಭಾಷೆ, ಚರಿತ್ರೆ, ಸಂಸ್ಕೃತಿ, ಮಾನವತೆ, ಶಾಸನ, ಭೂಗೋಳ ಚರಿತ್ರೆ, ಸಾಹಿತ್ಯ ಇನ್ನೂ ಮುಂತಾದ ಜ್ಞಾನಶಿಸ್ತುಗಳು ಅಡಗಿ ಕುಳಿತಿರುತ್ತವೆ. ಅದರಲ್ಲಿ ನಾಗರಿಕತೆಯ ಪೂರ್ವ ಚರಿತ್ರೆಯ ಪಳಯುಳಿಕೆಗಳು ಅಡಗಿರುತ್ತವೆ.

## ೧.೧. ಅಧ್ಯಯನದ ಉದ್ದೇಶ

ಶಾಸ್ತ್ರೀಯವಾಗಿ ನಡೆಯಬೇಕಾದ ಅಧ್ಯಯನಗಳ ಪೈಕಿ ಸ್ಥಳನಾಮ ಅಧ್ಯಯನವೂ ಒಂದು. ಮಾನವನ ಹುಟ್ಟು ಮತ್ತು ಅವನು ವಾಸಿಸುತ್ತಿದ್ದ ಸ್ಥಳಗಳ ಉಗಮ, ಇತಿಹಾಸ, ಜನಜೀವನ, ಸಂಸ್ಕೃತಿ, ನಾಗರಿಕತೆ, ಪಳೆಯುಳಿಕೆಗಳು ಮುಂತಾದವುಗಳ ಬಗೆಗಿನ ತಿಳುವಳಿಕೆ ಸ್ಥಳನಾಮಗಳ ಅಧ್ಯಯನದಿಂದ ಸಾಧ್ಯ. ಗತಕಾಲದಲ್ಲಿ ನಡೆದ ಘಟನೆಗಳನ್ನು, ಭೌಗೋಳಿಕ ವಿವರಗಳನ್ನೂ, ಯುದ್ಧದ ಪರಿಣಾಮಗಳನ್ನೂ, ವೀರರು ಜಯಿಸಿದ ಕಾಳಗಗಳನ್ನು, ಆರ್ಥಿಕ ಅಭಿವೃದ್ಧಿಯನ್ನೂ, ವಿಜ್ಞಾನದ ಮುನ್ನಡೆಯನ್ನೂ, ಒಂದು ರಾಷ್ಟ್ರದ ಕೀರ್ತಿಯನ್ನೂ ಸ್ಥಳನಾಮಗಳು ತಿಳಿಸುತ್ತವೆ. ಒಂದೊಂದು ಊರಿನ ಸ್ಥಳನಾಮ ವಿಚಾರಗಳು ಅವುಗಳ ಆಳ ವಿಸ್ತಾರಕ್ಕೆ ಪ್ರವೇಶಿಸಿದಂತೆ ಅವುಗಳನ್ನು ಒರೆಹಚ್ಚಿ ನೋಡಿದಂತೆ ಸ್ಥಳನಾಮ ಸಂಶೋಧಕರಿಗೆ ಅಪರಿಮಿತವಾದ ಸತ್ಯದ ತಿರುಳನ್ನು ಸ್ಥಳನಾಮಗಳು ದೊರಕಿಸಿಕೊಡುತ್ತವೆ.

ಕನ್ನಡದಲ್ಲಿ ಸ್ಥಳನಾಮ ಅಧ್ಯಯನಗಳು ಎಂಬತ್ತರ ದಶಕದಿಂದ ವ್ಯಾಪಕವಾಗಿ ನಡೆಯುತ್ತಿವೆ. ವಿಶ್ವವಿದ್ಯಾಲಯಗಳಲ್ಲಿ, ಜಿಲ್ಲಾವಾರು, ಕೆಲವು ಅಧ್ಯಯನಗಳಾಗಿವೆ. ಆದರೆ ಮೊಳಕಾಲ್ಮೂರು

ತಾಲೂಕಿನ ಶಾಸನೋಕ್ತ ಸ್ಥಳನಾಮಗಳಿಗೆ ಸಂಬಂಧಿಸಿದಂತೆ ವ್ಯಾಪಕವಾದ ಅಧ್ಯಯನಗಳು ನಡೆದಿಲ್ಲ. ಇದನ್ನು ಗಮನದಲ್ಲಿಟ್ಟುಕೊಂಡು ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳಲ್ಲಿ ಅಡಗಿರುವಂತಹ ಭಾಷೆ, ಸಂಸ್ಕೃತಿ, ವ್ಯಕ್ತಿನಾಮಗಳು, ಚಾರಿತ್ರಿಕ ಭೌಗೋಳಿಕ ಅಂಶಗಳು ಸ್ಥಳನಾಮಗಳ ಹಿಂದೆ ಇರುವಂತಹ ಹಿನ್ನೆಲೆ ಉಲ್ಲೇಖಿತವಾಗಿರುವಂತಹ ಹಳ್ಳಿಗಳು ಇಂದು ಭಾಷಿಕವಾಗಿ, ಸಾಮಾಜಿಕವಾಗಿ, ಬದಲಾವಣೆಗಳಾಗಿದ್ದರೆ, ಯಾವ ಹಿನ್ನೆಲೆಯಲ್ಲಿ ಬದಲಾವಣೆಗಳಿಗೆ ಒಳಪಟ್ಟಿವೆ ಹಾಗೂ ಸ್ಥಳಗಳ ಐತಿಹ್ಯಗಳ ಬಗ್ಗೆ ತಿಳಿಯುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳನ್ನು ಇದುವರೆಗೂ ಯಾರು ಶಾಸ್ತ್ರೀಯವಾಗಿ ಅಧ್ಯಯನಕ್ಕೆ ಒಳಪಡಿಸಿಲ್ಲ. ಆಗೊಮ್ಮೆ, ಈಗೊಮ್ಮೆ ಸಭೆ ಸಮಾರಂಭಗಳಲ್ಲೊ, ಸ್ಮರಣ ಸಂಚಿಕೆಗಳಲ್ಲೊ, ಲೇಖನಗಳಲ್ಲೊ ಪ್ರಾಸಂಗಿಕವಾಗಿ ಮಾತ್ರ ಪ್ರಸ್ತಾಪಿಸಲಾಗಿದೆ. ಈ ಪ್ರಸ್ತಾಪಗಳ ಹಿಂದೆ ಅಪೇಕ್ಷಿಥ ಗಂಭೀರ ಚಿಂತನೆ ಅಡಗಿಲ್ಲ. ಆದ್ದರಿಂದ ನನ್ನ ಅಧ್ಯಯನ ವ್ಯಾಪ್ತಿಯು "ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಸಿಗುವಂತಹ ಶಾಸನೋಕ್ತ ಸ್ಥಳನಾಮಗಳಿಗೆ ಅಷ್ಟೆ ಸೀಮಿತವಾಗಿದೆ.

ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳನ್ನು ಅಧ್ಯಯನಕ್ಕೆ ಒಳಪಡಿಸುವ ಮೂಲಕ, ಈ ಕ್ಷೇತ್ರದಲ್ಲಿ ಆವರಿಸಿರುವ ಶೂನ್ಯ ವಾತಾವರಣವನ್ನು ಕೆಲ ಮಟ್ಟಿಗಾದರೂ ಹೋಗಲಾಡಿಸುವ ಹಂಬಲವನ್ನು ಈ ಅಧ್ಯಯನ ಹೊಂದಿದೆ.

## ೧.೩. ಅಧ್ಯಯನದ ಸ್ವರೂಪ

ಈ ಅಧ್ಯಯನವು ಪ್ರಮುಖವಾಗಿ ಆರು ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ಮೊದಲನೆಯ ಅಧ್ಯಾಯವು ಉದ್ದೇಶ, ವ್ಯಾಪ್ತಿ, ಅಧ್ಯಯನದ ಸ್ವರೂಪ, ವಿಧಾನ ಹಾಗೂ ಇದುವರೆಗಿನ ಅಧ್ಯಯನಗಳ ಸಮೀಕ್ಷೆ ಕುರಿತಾಗಿದೆ.

ಮೊದಲಿಗೆ ಪ್ರಸ್ತಾವನೆಯಲ್ಲಿ ಸ್ಥಳನಾಮಗಳ ಪಟ್ಟಿಗೆ ಸಂಬಂಧಿಸಿದಂತೆ ಆದಿಮಾನವನ ಬದುಕುವ ಜೀವನ ರೀತಿ, ಅವನು ನಾಗರೀಕವಾಗಿ ಬೆಳೆದುಬಂದ ಬಗೆ, ಹಾಗೂ ಅವನು ಸ್ಥಳನಾಮಗಳನ್ನು ಸಾಂಕೇತಿಕವಾಗಿ ಹೇಗೆ ಗುರುತಿಸಿಕೊಂಡನು ಅಲ್ಲದೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ಇದುವರೆಗಿನ ಅಧ್ಯಯನದ ಸಮೀಕ್ಷೆಯನ್ನು ಕುರಿತು ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಸ್ಥಳನಾಮಗಳ ಅರ್ಥ ಮತ್ತು ಇತಿಹಾಸ, ಸ್ಥಳನಾಮಗಳ ಹುಟ್ಟು ಮತ್ತು ಬೆಳವಣಿಗೆ, ಸ್ಥಳನಾಮಗಳನ್ನು ವಿದ್ವಾಂಸರ ವರ್ಗೀಕರಣದ ಮಾದರಿಗಳ ರೂಪರೇಷೆಯನ್ನು ಕುರಿತು ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಮೊಳಕಾಲ್ಮೂರು ತಾಲ್ಲೂಕಿನ ಪರಿಸರವನ್ನು ಕುರಿತು ವಿವೇಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳನ್ನು ಅವುಗಳ ಪ್ರಾದೇಶಿಕ ಹಿನ್ನೆಲೆಯ ಆಧಾರದ ಮೇಲೆ ವರ್ಗೀಕರಣವನ್ನು ಮಾಡುವುದಾಗಿದೆ.

ಐದನೆಯ ಅಧ್ಯಾಯದಲ್ಲಿ ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತಗಳಲ್ಲಿ ಉಲ್ಲೇಖಿತವಾಗಿರುವ ಸ್ಥಳನಾಮಗಳನ್ನು ಭಾಷಿಕವಾಗಿ ವಿಶ್ಲೇಷಣೆಗೆ ಒಳಪಡಿಸುವುದು.

ಆರನೆಯ ಅಧ್ಯಾಯವು ಸಮಾರೋಪವಾಗಿದ್ದು, ಅಧ್ಯಯನದ ಒಟ್ಟಾರೆ ಸ್ಥಳನಾಮಗಳ ಅಧ್ಯಯನದ ಸಾರಾಂಶವನ್ನು ನೀಡಲಾಗಿದೆ. ಅಧ್ಯಯನಕ್ಕೆ ಅಗತ್ಯವಿರುವ ಗ್ರಂಥಋಣ, ನಕಾಶೆಗಳು, ಛಾಯಾಚಿತ್ರಗಳು ಇನ್ನಿತರೆ ವಿವರಗಳನ್ನು ನೀಡಬಲ್ಲ ಕೋಷ್ಟಕಗಳನ್ನು ಅನುಬಂಧದಲ್ಲಿ ತೋರಿಸಲಾಗಿದೆ.

## ೧.೪. ಅಧ್ಯಯನದ ವಿಧಾನ

ಯಾವುದೇ ಒಂದು ಕಾರ್ಯವು ಯಶಸ್ವಿಯಾಗಬೇಕಾದರೆ ಕ್ರಮಬದ್ಧತೆ ಅತಿ ಮುಖ್ಯ. ಅದೇ ರೀತಿ ಸಂಶೋಧನಾ ಕಾರ್ಯಕ್ಕೂ ವ್ಯವಸ್ಥಿತ ಅಧ್ಯಯನ ಕ್ರಮ ಬಹಳ ಅವಶ್ಯವಾದದ್ದು. ಅಂತೆಯೇ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳುವ ಮುನ್ನ ಮೊಳಕಾಲ್ಮೂರು ತಾಲ್ಲೂಕಿಗೆ ಸಂಬಂಧಿಸಿದಂತೆ ಮಾಹಿತಿ ಪಡೆದುಕೊಳ್ಳಲಾಯಿತು. ಈಗಾಗಲೇ ಸಂಶೋಧನೆ ಆಗಿರುವ ವಿಷಯಗಳನ್ನು ಕುರಿತು ಮಾರ್ಗದರ್ಶಕರೊಂದಿಗೆ ಸಲಹೆಯನ್ನು ಪಡೆದುಕೊಂಡು, ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಯಿತು. ವಿಷಯದ ಆಯ್ಕೆಯು ಅಧಿಕೃತಗೊಂಡ ನಂತರ ಮೊಳಕಾಲ್ಮೂರು ತಾಲ್ಲೂಕಿನಲ್ಲಿರುವ ಶಾಸನಗಳ ಬಗ್ಗೆ ಮಾಹಿತಿ ಸಂಗ್ರಹಿಸಲಾಯಿತು. ಶಾಸನಗಳನ್ನು ಓದಿ ಅದರಲ್ಲಿರುವ ಸ್ಥಳಗಳನ್ನು ಗುರುತಿಸಿಕೊಂಡು, ಪಟ್ಟಿ ಮಾಡಿಕೊಳ್ಳಲಾಯಿತು. ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಗ್ರಂಥಾಲಯದ ಕಾರ್ಯವನ್ನು ಕೈಗೊಂಡು ಮೊಳಕಾಲ್ಮೂರಿನ ಸಾರ್ವಜನಿಕ ಗ್ರಂಥಾಲಯ ಮತ್ತು ಕನ್ನಡ ಹಂಪಿ ವಿಶ್ವವಿದ್ಯಾಲಯದ ಗ್ರಂಥಾಲಯಗಳಿಗೆ ಭೇಟಿ ನೀಡಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಉಪಲಬ್ಧವಾದ ದಾಖಲೆಗಳನ್ನು ಪರಿಶೀಲಿಸಿ, ಮಾಹಿತಿಯನ್ನು ಸಂಗ್ರಹಿಸಿ ಮತ್ತು ಸ್ಥಳನಾಮಗಳ ಕುರಿತು ಪಿಎಚ್.ಡಿ. ಮಹಾಪ್ರಬಂಧಗಳನ್ನು ಪರಿಶೀಲಿಸಿ ಮಾಹಿತಿಯನ್ನು ಕಲೆಹಾಕಲಾಯಿತು.

## ೧.೫. ಅಧ್ಯಯನದ ಸಮೀಕ್ಷೆ

ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬರುವ ತಾಲ್ಲೂಕುಗಳಲ್ಲಿ ಮೊಳಕಾಲ್ಮೂರು ಕೂಡ ಒಂದಾಗಿದೆ. ಮೊಳಕಾಲ್ಮೂರು ತಾಲ್ಲೂಕು ಪ್ರಾಚೀನ ಕಾಲದಿಂದ ಇಂದಿನ ಕಾಲದವರೆಗೂ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಇಂತಹ ಇತಿಹಾಸವಿರುವ ತಾಲ್ಲೂಕಿನ ಬಗ್ಗೆ ಇದುವರೆಗೆ ಅನೇಕ ಅಧ್ಯಯನಗಳು, ಸಂಶೋಧನೆಗಳು ನಡೆದು ಅನೇಕ ಕೃತಿಗಳು, ಪ್ರಬಂಧಗಳು, ಲೇಖನಗಳು ಮುಂತಾದ

ಪ್ರಕಾರಗಳು ರಚನೆಯಾಗಿವೆ. ಇವುಗಳಲ್ಲಿ ಕೆಲವು ವೈಚಾರಿಕ ಮತ್ತು ಚಾರಿತ್ರಿಕ ವಸ್ತುಗಳ ಬಗೆಗಿನ ಖಚಿತ ವಿಶ್ಲೇಷಣೆಯಿಲ್ಲದೆ ಸೊರಗಿದ್ದರೂ, ವಿವಿಧ ಕಾಲಘಟ್ಟದಲ್ಲಿ ಆದ ಒಟ್ಟಾರೆ ಬದಲಾವಣೆಯ ಸ್ಥಿತ್ಯಂತರಗಳನ್ನು ಸ್ಥೂಲವಾಗಿಯಾದರೂ ತಿಳಿದುಕೊಳ್ಳಲು ಸಹಾಯಕವಾಗಿವೆ. ತಾಲ್ಲೂಕಿನ ಸಮಗ್ರ ಚರಿತ್ರೆ ಕುರಿತು ಮೊದಲನೇ ವರ್ಗದ ಪ್ರಕಟಣೆಗಳಲ್ಲಿ ೧೯೦೩ರಲ್ಲಿ ಪ್ರಕಟವಾದ ಬಿ.ಎಲ್. ರೈಸ್ ಸಂಪಾದಿತ 'ಎಫಿಗ್ರಫಿಯಾ ಕರ್ನಾಟಕ ಸಂಪುಟ' ಪ್ರಮುಖವಾಗಿ ನಿಲ್ಲುವಂಥದ್ದು. ಇದು ರೈಸ್‌ರವರು ಹೊರತಂದ ಶಾಸನ ಸಂಪುಟಗಳ ಸರಣಿಯಲ್ಲಿ ಹನ್ನೊಂದನೆಯದು ಚಿತ್ರದುರ್ಗ ಜಿಲ್ಲೆಯ ಶಾಸನಗಳ ಸಂಗ್ರಹವನ್ನು ಒಳಗೊಂಡಿದೆ.

ಚಿತ್ರದುರ್ಗ ಜಿಲ್ಲೆಯ ವ್ಯಕ್ತಿನಾಮಗಳು, ಡಾ. ಸಣ್ಣ ಪಾಪಯ್ಯ, "ಮೊಳಕಾಲ್ಮೂರು ತಾಲ್ಲೂಕಿನ ಸ್ಥಳನಾಮಗಳು" ಬಿ. ಮೈಲಾರಪ್ಪ ಎಂ.ಫಿಲ್ ಪ್ರಬಂಧ, ಕರ್ನಾಟಕ ಆಂಧ್ರ ಗಡಿಪ್ರದೇಶದ ಸ್ಥಳನಾಮಗಳು – ಜಾಜಿ ದೇವೇಂದ್ರಪ್ಪ ಪಿಎಚ್.ಡಿ. ಪ್ರಬಂಧ, ಚಿತ್ರದುರ್ಗದ ಜಿಲ್ಲೆಯ ಸ್ಥಳನಾಮಗಳು ಒಂದು ಅವಲೋಕನ, ಗೋಪಾಲಕೃಷ್ಣ, ಚಿತ್ರದುರ್ಗ ಜಿಲ್ಲೆಯ ಶಾಸನಗಳ ಸ್ಥಳನಾಮಗಳು ಒಂದು ಅವಲೋಕನ, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ೨೦೦೫, ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳು, ಮಣಿಕಂಠ ಬಿ. ಎಂ.ಫಿಲ್. ಪ್ರಬಂಧ.

ಹೀಗೆ ಮೊಳಕಾಲ್ಮೂರು ತಾಲ್ಲೂಕಿನ ಸ್ಥಳನಾಮಗಳಿಗೆ ಸಂಬಂಧಿಸಿದಂತೆ ಇನ್ನೂ ಅನೇಕ ಕೃತಿಗಳು, ಲೇಖನಗಳು ರಚನೆಯಾಗಿವೆ. ಆದರೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಪ್ರಮುಖವಾದ ದಾಖಲೆಗಳನ್ನು ಮಾತ್ರ ಸಂಗ್ರಹಿಸಲಾಗಿದೆ.



# ಅಧ್ಯಾಯ : ಎರಡು

# ಸ್ಥಳನಾಮಗಳ ವಿವೇಚನೆ

# ಅಧ್ಯಾಯ: ಎರಡು

## ಸ್ಥಳನಾಮಗಳ ವಿವೇಚನೆ

ಜಗತ್ತಿನಾದ್ಯಂತ ಎಲ್ಲಾ ಕಡೆಗಳಲ್ಲಿಯೂ ಸ್ಥಳನಾಮಗಳ ಉಗಮದ ಕಾರಣಗಳು ಒಂದೇ ರೀತಿಯಾಗಿ ತಿಳಿದುಬರುತ್ತವೆ. ಪ್ರಕೃತಿಗೆ ಶರಣಾಗತವಾಗಿರುವಂತಹ ಮಾನವನು ತಾನು ನೆಲೆಯೂರಿರುವ ಪ್ರದೇಶವನ್ನು ಸಾಂಕೇತಿಕವಾಗಿ ಸೂಚಿಸಲು, ಆ ಪ್ರದೇಶಕ್ಕೆ ಒಂದು ಹೆಸರನ್ನು ಸೂಚಿಸಿದನು. ಈ ಕಾರ್ಯವನ್ನು ಮಾನವನು ಬರವಣಿಗೆಯ ರೂಪ ಬರುವುದಕ್ಕೂ ಮೊದಲೇ ಕೈಗೊಂಡಿದ್ದನು.

ಭೂಮಿಯ ಮೇಲೆ ಸಕಲ ಜಲಚರ ಜೀವ ಸಂಕುಲಗಳು ಬದುಕಲಿಕ್ಕೆ ಆಧಾರವಾಗಿರುವಂಥದ್ದು ಪ್ರಕೃತಿ, ಇಂತಹ ಪ್ರಕೃತಿ ಸಹಜ ಕಲ್ಲಾಸರೆ, ಗುಹೆಗಳು, ಬಂಡೆಗಳ ಕೆಳಗೆ ವಾಸವಿದ್ದ ಅವನು ಬೇಟೆಯಾಡಿ ಹಸಿಮಾಂಸನ್ನು ತಿಂದು ಬದುಕುತ್ತಿದ್ದನು. ಅಂತಹ ಸಂದರ್ಭದಲ್ಲಿ ಬೆಂಕಿಯ ಉಪಯೋಗವನ್ನು ಕಂಡುಕೊಂಡ. ಬೇಟೆಯಾಡುತ್ತಿದ್ದ ಮನುಷ್ಯ ಅವುಗಳಲ್ಲಿಯೇ ಕೆಲವೊಂದು ಪ್ರಾಣಿಗಳನ್ನು ಸಾಕುವುದನ್ನು ಕಲಿತುಕೊಂಡನು. ಆ ಸಾಕು ಪ್ರಾಣಿಗಳ ಆಹಾರಕ್ಕಾಗಿ ಹುಲ್ಲಿನ ಅಗತ್ಯತೆ ಉಂಟಾಯಿತು. ಆಗ ಅವನು ಕೃಷಿಯ ಕಡೆಗೆ ಮುಖ ಮಾಡಿದನು. ಹೀಗೆ ಕೃಷಿಯನ್ನು ಕಲಿತುಕೊಂಡ ಮನುಷ್ಯನಿಗೆ ಕೃಷಿ ಮಾಡಲು ಪ್ರಮುಖವಾಗಿ ನೀರು ಬೇಕಾಯಿತು.

'ಸಕಲ ಜೀವಜಂತುಗಳಿಗೂ ನೀರು ಜೀವನಾಧಾರ' ನೀರು ಇರುವ ಎಡೆಗಳಿಗೆ ಹೋಗಿ ಬೀಡುಬಿಟ್ಟನು. ಅಲ್ಲಿಗೆ ಅವನ ಅಗತ್ಯತೆಗಳು ಕಡಿಮೆಯಾಗಲಿಲ್ಲ. ಒಂದಾದ ಮೇಲೆ ಒಂದರಂತೆ ಅಗತ್ಯಗಳ ಮಹಾಪೂರವೇ ಹರಿದುಬಂದಿತು. ಬೀಡುಬಿಟ್ಟಂತಹ ಸ್ಥಳದಲ್ಲಿ ಸಾಕುಪ್ರಾಣಿಗಳ ರಕ್ಷಣೆಗಾಗಿ ಅದರ ಸುತ್ತಲೂ ಬೇಲಿಯ ನಿರ್ಮಾಣ ಮಾಡಿಕೊಂಡನು. ಆಹಾರ ಬೆಳೆಗಳನ್ನು ಬೆಳೆಯಲು ಆರಂಭಿಸಿದ. ಅಲ್ಲಿರುವಂತಹ ಪ್ರಕೃತಿಗೆ ಸಹಜವಾಗಿ ಒಂದು ಹೆಸರನ್ನು ಕೊಟ್ಟನು. ಆ ಹೆಸರುಗಳು ಮೊದಲಿಗೆ ನಿಸರ್ಗವಾಚಿ, ಜನಾಂಗವಾಚಿ, ಶಿಲಾವಾಚಿ, ವ್ಯಕ್ತಿವಾಚಿಗಳಾಗಿ ಸಂಸ್ಕೃತಿಯನ್ನು ಪ್ರತಿನಿಧಿಸುವ ಆಧಾರಸ್ತಂಭಗಳಾಗಿ ಬೆಳವಣಿಗೆಯನ್ನು ಹೊಂದಿದವು. ಒಬ್ಬರಿಂದ

ಮತ್ತೊಬ್ಬರನ್ನು ಬೇರ್ಪಡಿಸಲು ಒಂದಕ್ಕಿಂತ ಇನ್ನೊಂದು ಭಿನ್ನ ಎಂದು ಹೇಳಲು ಸಾಂಕೇತಿವಾಗಿ ಹೆಸರುಗಳನ್ನು ಇಟ್ಟುಕೊಂಡನು. ಅವುಗಳೇ ಇಂದು ಸ್ಥಳನಾಮಗಳಾಗಿ ಬೆಳೆದಿವೆ.

ಒಂದು ಆಶ್ಚರ್ಯಕರ ಸಂಗತಿಯೆಂದರೆ ಜಗತ್ತಿನಾದ್ಯಂತ ಎಲ್ಲಾ ಸ್ಥಳನಾಮಗಳು ಕೂಡ ಒಂದೇ ರೀತಿಯಾದ ತಮ್ಮ ಹುಟ್ಟಿನ ಮೂಲವನ್ನು ತಿಳಿಸುತ್ತವೆ. ಸ್ಥಳನಾಮಗಳ ಅಧ್ಯಯನ ಎಷ್ಟು ಸರಳವೋ ಅಷ್ಟೇ ಜಟಿಲವೂ ಹೌದು. ಒಂದೇ ಸ್ಥಳನಾಮವು ವಿವಿಧ ಮುಖಗಳನ್ನು ನಿರೂಪಿಸುತ್ತದೆ. ಅದನ್ನು ಕೆದಕುತ್ತಾ ಹೋದಂತೆ ಅದರ ಆಳ-ಹರಿವು ತಿಳಿಯುತ್ತದೆ. ಇದು ಖಂಡಿತವಾಗಿಯೂ ಶಾಸ್ತ್ರೀಯವಾಗಿ ಅಧ್ಯಯನ ಮಾಡಲೇಬೇಕಾದ ವಿಷಯವಾಗಿದೆ.

ಸ್ಥಳನಾಮಗಳು ಅಂದಿನ ಕಾಲದ ಜನರ ಜೀವನ ವಿಧಾನ, ಆಚಾರ-ವಿಚಾರ, ಸಂಸ್ಕೃತಿ, ಆಹಾರ ಪದ್ಧತಿಗಳು, ರಾಜಮನೆತನಗಳು, ಆದಿ ಹಳೆಶಿಲಾಯುಗದ ನೆಲೆಗಳು, ಮಾನವನ ಜೀವನ ಮತ್ತು ವಿಕಾಸದ ವೃತ್ತಾಂತಗಳನ್ನು ತಿಳಿಯಪಡಿಸುತ್ತವೆ. ರಾಜಕೀಯ, ಸಾಮಾಜಿಕ, ಐತಿಹಾಸಿಕ, ಚಾರಿತ್ರಿಕ, ಜಾನಪದೀಯ ಅಂಶಗಳನ್ನು ಅಷ್ಟೇ ಅಲ್ಲದೆ, ರಾಮಾಯಣ, ಮಹಾಭಾರತ, ಭಾಗವತ, ಸಂಪ್ರದಾಯದ ಸುತ್ತ ಎಣೆಯಲ್ಪಟ್ಟಿರುವ ವಿಚಾರಧಾರೆಗಳನ್ನು ಜನಪದರ ಬಾಯಿಂದ ನಾವು ಕೇಳಬಹುದಾಗಿದೆ. ಆದರೆ ಅಂದಿನ ಕಾಲದ ಜನರು, ದೇವರು ಧರ್ಮದ ಬಗೆಗೆ ಅವರು ಕೊಡುತ್ತಿದ್ದ ಗೌರವ ಸೂಚ್ಯವಾಗಿ ಸ್ಥಳನಾಮಗಳು ತೋರುತ್ತವೆ.

### ೨.೧. ಸ್ಥಳನಾಮ ಪದದ ಅರ್ಥ ಮತ್ತು ಇತಿಹಾಸ

**ಅರ್ಥ:** "ಇಂಗ್ಲೀಷ್ ಭಾಷೆಯಲ್ಲಿ ಸ್ಥಳನಾಮಶಾಸ್ತ್ರಕ್ಕೆ 'ಟೋಪೋನಮಿ' (Toponomy) ಎಂದು ಹೆಸರು. ಇದು ಮೂಲತಃ ಗ್ರೀಕ್‌ನ Tops+Nomos ಎಂಬೆರಡು ಸಂಯುಕ್ತ ಪದಗಳಿಂದ ಬಂದದ್ದಾಗಿದೆ. ಅಲ್ಲದೆ ಇದನ್ನು Toponomy ಎಂದು ಇಂಗ್ಲೀಷ್-ಕನ್ನಡ ನಿಘಂಟಿನ ಪುಟ(೧೩೩೨)ದಲ್ಲಿ ಉಲ್ಲೇಖಿಸಲಾಗಿದೆ. ಇದರ ಅರ್ಥ ಒಂದು ಪ್ರದೇಶದ ಸ್ಥಳಗಳ ಹೆಸರುಗಳು, ಸ್ಥಳನಾಮ ಊರ ಹೆಸರುಗಳೆಂದಿದೆ.

Topos+Nomos ಎಂಬುದು Toponomy ಆಗಿ, ಇದೀಗ ಎಂಬ ರೂಪ ತಳೆಯಲು ಬಹುಶಃ ಸ್ವರ ಸಾಮರಸ್ಯ ಅಥವಾ ಸ್ವರಾನುರೂಪ್ಯ ನಿಯಮವು ಅನ್ವಯವಾಗಿರುವುದೇ ಕಾರಣವಾಗಿದೆ. Topos ಅಂದರೆ Place ಸ್ಥಳವಾದರೆ nomos ಅಂದರೆ 'a study of place names' ಎಂದು ಸ್ಥಳನಾಮ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೧]

ಸ್ಥಳನಾಮಗಳಿಗೆ ಸಂಬಂಧಿಸಿದಂತೆ ವಿವಿಧ ಕೋಶಗಳಲ್ಲಿ ಅನೇಕ ರೀತಿಯ ಮಾಹಿತಿಗಳು ಲಭ್ಯವಾಗುತ್ತವೆ. ನ್ಯೂ ಎನ್ಸೈಕ್ಲೋಪೀಡಿಯಾ ಆಫ್ ಬ್ರಿಟಾನಿಕಾದಲ್ಲಿ Place name ಬಗ್ಗೆ ಹೀಗೆ ಹೇಳಿದೆ "Disignation of a Geographical Locality, as a town, liver or mountain. The origins of such names are varied some derived from description of physical features." ಸ್ಥಳನಾಮಗಳ ಭೌತಿಕ ಮತ್ತು ಭೌಗೋಳಿಕ ರಚನೆಯನ್ನು ತಿಳಿದುಕೊಳ್ಳುವ ವಿಧಾನಕ್ಕೆ

‘ಟಪೋಗ್ರಫಿ’ (Topography) ಎಂದು ಅರ್ಥವಿದೆ.”[೨] “ಟೊಪಾಗ್ರಫಿ ಎಂದು ಕರೆಯುವುದುಂಟು. ಇದು ಸ್ಥಳ ವಾಸ್ತವ್ಯವನ್ನು ತಿಳಿಸುತ್ತದೆ.” “ಅಲ್ಲದೆ ಟಾಪ್+ಗ್ರಫಿ” (Topp+grafi) “ಟಾಪೊಲಜಿ”, ಒನಾಮಸ್ಟಿಕ್[೩] ಎಂದು ಕರೆಯುವುದುಂಟು.

ಕನ್ನಡದ ಸ್ಥಳನಾಮಗಳು ಮುಖ್ಯವಾಗಿ ಎರಡು ಆಕೃತಿಮಗಳಿಂದ ರೂಪಿತವಾಗಿವೆ. ಇವುಗಳಲ್ಲಿ ಪೂರ್ವತ ಆಕೃತಿಮವನ್ನು ನಿರ್ದಿಷ್ಟ ಅಥವಾ ಘಟಕವೆಂದೂ, ಉತ್ತರ ಆಕೃತಿಮವನ್ನು ವಾರ್ಗಿಕವೆಂದೂ ಕರೆಯುವುದುಂಟು.[೪] ಈ ರೀತಿಯಾಗಿ ಕನ್ನಡ ಸ್ಥಳನಾಮಗಳು ರೂಪಿತವಾಗಿವೆ. ಸ್ಥಳನಾಮಶಾಸ್ತ್ರ ಎಂದು ಕರೆಯಲಾಗಿರುವ ನಾಮಶಾಸ್ತ್ರ ಪ್ರಕಾರದಲ್ಲಿ ಗ್ರಾಮನಾಮಶಾಸ್ತ್ರ ಹಾಗೂ ಸ್ಥಳನಾಮಶಾಸ್ತ್ರ ಎಂಬ ಎರಡು ಕವಲುಗಳಿವೆ. ಸ್ಥಳನಾಮ ನಾಮಪ್ರಕಾರದ ಸಮಗ್ರ ರೂಪವಾದರೆ, ‘ಗ್ರಾಮನಾಮ’ ಎಂಬುದು ಅದರ ಸಂಕ್ಷಿಪ್ತ ವ್ಯಾಪ್ತಿಯ ರೂಪ. ಹಾಗೆಂದು ಇವೆರಡು ಪ್ರತ್ಯೇಕವೆಂದಾಗಲಿ ಅಥವಾ ಒಂದೇ ಎಂದಾಗಲಿ ಭಾವಿಸುವಂತಿಲ್ಲ. ತಮ್ಮದೇ ಆದ ವಿಶಿಷ್ಟತೆಯಿಂದ ಏಕಕಾಲಕ್ಕೆ ಅಭಿನ್ನವೂ, ಭಿನ್ನವೂ ಆಗಿಬಿಡುವ ಸಾಧ್ಯತೆಯಿದೆ. ಅವೆರಡರ ವಿಸ್ತೃತವಾದ ಅಧ್ಯಯನದ ಮೂಲಕವೇ ನಾಮಾಧ್ಯಯನದ ಇಡಿಯಾದ ರೂಪವೊಂದರ ಗ್ರಹಿಕೆಯಾಗಲು ಸಾಧ್ಯವಿದೆ[೫] ಎಂದು ಹೇಳುತ್ತೇವೆ.

ಇಂಗ್ಲೀಷ್‌ನಲ್ಲಿ ಗ್ರಾಮನಾಮಶಾಸ್ತ್ರಕ್ಕೆ Toponomy ಎಂದು ಹೆಸರು. ಇದು ಗ್ರೀಕ್‌ನ Topos ಮತ್ತು namos ಎಂಬೆರಡು ಪದಗಳಿಂದ ಬಂದದ್ದಾಗಿದೆ. ಸಂಸ್ಕೃತದಲ್ಲಿ ಗ್ರಾಮನಾಮ, ತೆಲುಗಿನಲ್ಲಿ ಉರ್‍ಲ, ಪೇರು, ತಮಿಳಿನಲ್ಲಿ ಇಡೈಪೆಯರ್, ಕನ್ನಡದಲ್ಲಿ ಊರ ಹೆಸರುಗಳು ಎಂದು ಕರೆಯಲಾಗುತ್ತಿದೆ.

**ಸ್ಥಳನಾಮದ ಇತಿಹಾಸ**

ಒಂದು ಸ್ಥಳದ ಹೆಸರನ್ನು ಅಧ್ಯಯನ ಮಾಡುವ ವ್ಯಕ್ತಿಯು ಆ ಸ್ಥಳದ ಸನ್ನಿವೇಶ, ಭೌಗೋಳಿಕ ಪರಿಸರ ಪ್ರಕೃತಿಯ ದರ್ಶನವನ್ನು ಅರಿತಿರಬೇಕು. ಆ ಸ್ಥಳದ ಮೂಲವನ್ನು ಅರಿಯಲು ಆತ ಯತ್ನಿಸಬೇಕು. ಒಂದು ನಿರ್ದಿಷ್ಟ ಕಾಲದಲ್ಲಿ ತಲೆಯೆತ್ತಿದ ಸ್ಥಳನಾಮಗಳ ಹೆಸರಿನಲ್ಲಿ ಆ ಸ್ಥಳದ ಭೂ ವಿಶೇಷತೆಯು ಸೇರಿಕೊಂಡಿರುತ್ತದೆ. ಒಂದು ಇನ್ನೊಂದು ಸ್ಥಳದ ಹೆಸರನ್ನು ಪ್ರತ್ಯೇಕವಾಗಿರಿಸಿ ನೋಡಲು ಅವಕಾಶ ಮಾಡಿಕೊಡುವಂತಾಗುತ್ತದೆ.

ಸ್ಥಳನಾಮಗಳು ತಮ್ಮದೇ ಆದ ವಿಶಿಷ್ಟ ರೀತಿಯ ಹೆಸರುಗಳಿಂದ ಕೂಡಿರುತ್ತವೆ. ಅವುಗಳನ್ನು ಒಂದೊಂದಾಗಿ ಬಿಡಿಸಿ ನೋಡಿದಾಗ ಸ್ಫೂರ್ತಿಯ ಬುಗ್ಗೆಗಳಾಗಿ ಹೊರಹೊಮ್ಮುತ್ತವೆ. ಇಂತಹ ಸ್ಥಳನಾಮಗಳು ಕೇವಲ ವ್ಯಕ್ತಿಗಷ್ಟೇ ಸೀಮಿತವಾಗಿರುವುದಿಲ್ಲ. ಹಳ್ಳಿ, ಊರು, ಬೆಟ್ಟಗುಡ್ಡ, ಸರೋವರ, ಕಂದರ, ಸಮುದ್ರ ಇತ್ಯಾದಿಗಳಿಗೂ ಸ್ಥಳನಾಮಗಳ ಹರಿವು ವಿಸ್ತಾರಗೊಂಡಿದೆ.

ಪ್ರತಿಯೊಂದು ಸ್ಥಳನಾಮದ ಹೆಸರಿನ ಹಿಂದೆ ಪೌರಾಣಿಕ, ಇಲ್ಲವೆ ಐತಿಹಾಸಿಕ ವಿಚಾರಧಾರೆಗಳು ಅಡಕವಾಗಿರುತ್ತವೆ. ಒಂದು ಕಡೆ ನೆಲೆನಿಲ್ಲಲು ನೆಲ, ಭದ್ರವಾಗಿ ಬೇರೂರುವ ಊರು ವ್ಯವಸಾಯಕ್ಕೆ ಸಂಬಂಧಿಸಿದ ಗದ್ದೆ, ತೋಟ, ಕೆರೆ, ಕಟ್ಟೆ, ಏರಿ ಆಸರೆಯಾಗಿ

ನಿರ್ಮಿಸಿಕೊಂಡ ಮನೆ, ಹಳ್ಳಿ, ಗ್ರಾಮ, ಪೇಟೆ ಮುಂತಾದವುಗಳು ಮಾನವನ ಜೀವನದ ವಿಕಾಸದ ಚಾರಿತ್ರಿಕ ಹಂತಗಳನ್ನು ಹಾದುಹೋದಂತಹ ಕುರುಹುಗಳು ಸ್ಥಳನಾಮ ಅಧ್ಯಯನದಿಂದ ಸಾಧ್ಯವಾಗುತ್ತವೆ.

"ಭೂಮಿಯ ಮೇಲೆ ಮನುಕುಲದ ಸೃಷ್ಟಿಯಾದ ಮೇಲೆ, ಆತನ ಜೀವನಕ್ಕೆ ಒಂದು ನಿಶ್ಚಿತ ನೆಲೆಯನ್ನು ಕಂಡುಕೊಳ್ಳಬೇಕಾಯಿತು. ಆ ನೆಲೆಯೇ ಕಾಡು-ಮೇಡು, ಹಳ್ಳ, ಹೊಳೆ, ನದಿ, ತಟಗಳಾದವು. ಕೃಷಿನಿರತನಾದ ಮಾನವನು ಅನಾಗರೀಕತೆಯನ್ನು ಬಿಟ್ಟು ನಾಗರೀಕತೆಯೆಡೆಗೆ ತನ್ನ ಜೀವನ ವಿಧಾನವನ್ನು ಬದಲಾವಣೆ ಮಾಡಿಕೊಂಡನು. ತನ್ನ ಜೀವನವನ್ನು ವ್ಯವಸ್ಥಿತವಾಗಿ ನಡೆಸಲು ವಿವಿಧ ವೃತ್ತಿಗಳನ್ನು ಕೈಗೊಂಡನು. ಕಮ್ಮಾರ, ಕುಂಬಾರ, ಬಡಗಿ, ಗಾಣಿಗ, ಪರಿವಾರ, ಪೂಜಾರಿ, ಈಡಿಗ, ಮಡಿವಾಳ, ಸೋನುಗಾರ, ಹಾವಾಡಿಗ, ಕಂಚುಗಾರ, ಬಿಲ್ವಗಾರ ಮುಂತಾದ ವೃತ್ತಿಗಳನ್ನು ಮಾಡತೊಡಗಿದ."[೬] ವೇದಗಳ ಕಾಲದ ಸುಮಾರಿಗೆ ಜಗತ್ತಿನ ಬಹುಪಾಲು ಜನರು ಕೃಷಿಕರಾಗಿದ್ದರು. ಅವರ ವಾಸಸ್ಥಳ ಕಾಡೇ ಆಗಿದ್ದಿತು. ನದಿಯ ಸಮೀಪದಲ್ಲಿ ನೆಲೆನಿಂತು ಮೀನು ಹಿಡಿದು ವಾಸ ಮಾಡುವಂತಹ ಜನರ ಕೇರಿಗಳು ಬೆಸ್ತರ ಕೇರಿಗಳಾದವು.

ಸ್ಥಳನಾಮದ ಇತಿಹಾಸವನ್ನು ಅರಿಯಬೇಕಾದರೆ ನಾವು ರಾಮಾಯಣ, ಮಹಾಭಾರತ, ಪೌರಾಣಿಕ, ಐತಿಹಾಸಿಕ, ರಾಜರ ಲಾಂಛನಗಳು, ಸಂಸ್ಥೆ, ಮಠ, ಮಾನ್ಯಗಳಿಗೆ ಉಂಬಳಿಯಾಗಿ ಕೊಟ್ಟಂತಹ ಊರ ಹೆಸರುಗಳನ್ನು ದಾನ ಕೊಟ್ಟಿರುವ ರಾಜ ಅಥವಾ ರಾಣಿಯ ಹೆಸರಿನಲ್ಲಿ ಪುನರ್‌ನಾಮಕರಣ ಮಾಡಲಾಗಿದೆ.

ರಾಮಾಯಣ-ಮಹಾಭಾರತದಲ್ಲಿ ಬರುವ ರಾಮ, ಸೀತೆ, ಲಕ್ಷ್ಮಣ, ಕುಂತಿ, ಭೀಮ, ಅರ್ಜುನ, ಧರ್ಮರಾಯ, ಶಕುನಿ ಮುಂತಾದ ವ್ಯಕ್ತಿಗಳ ಹೆಸರುಗಳು ಪ್ರಚಾರದಲ್ಲಿವೆ.

ಉದಾ. ಕನ್ನಂಬಾಡಿಕಟ್ಟೆ>ಕೃಷ್ಣರಾಜ ಸಾಗರವಾದರೆ

ಅರಿಕುತಾರ> ಚಾಮರಾಜನಗರವಾಗಿದೆ.

ಆದಿಮಾನವನು ವನ್ಯಜೀವಿಯಂತೆ ಉದರ ಪೋಷಣೆ, ದೇಹರಕ್ಷಣೆಗೆಲ್ಲ ನಿಸರ್ಗವನ್ನು ಅವಲಂಬಿಸಿದ್ದನು. ಅವನ ಜೀವನ ವ್ಯಾಪಾರ ಏಕಕ್ಷೇತ್ರಕ್ಕೆ ಸೀಮಿತವಾಗಿರಲಿಲ್ಲ. ಹಳ್ಳಿ ಕೊಳ್ಳಗಳು ಒಣಗಿದಂತೆಲ್ಲ ಹಣ್ಣು, ಹಂಪಲು ಬೇಗ ಕ್ಷೀಣಿಸಿದಂತೆಲ್ಲ, ಬೇಟೆಯ ಮಿಕಗಳು ಮುಗಿದಂತೆಲ್ಲ ಅವರು ಬೇರೆ ಬೇರೆ ಕಡೆಗೆ ಹೋಗುತ್ತಿದ್ದರು. ಇದು ನಮ್ಮ ನಾಡು, ಅದು ನಮ್ಮ ನಾಡು ಎಂಬುದಾಗಿ ಎಲ್ಲೆಯನ್ನು ಕಟ್ಟಿಕೊಂಡಿರಲಿಲ್ಲ. ಜಗತ್ತು ಭಗವಂತನದು. ಅದರ ಅನುಭೋಗ ಅವನ ಮಕ್ಕಳಿಗೆಲ್ಲ ಸಲ್ಲತಕ್ಕದೆಂಬ ಭಾವನೆಯು ಅವರಲ್ಲಿ ರಕ್ತಗತವಾಗಿತ್ತು.

ಕೃಷಿಯನ್ನು ಮುಖ್ಯ ಕಸುಬನ್ನಾಗಿ ಅವಲಂಬಿಸಿದ ಮನುಷ್ಯನು ಕಾಲ ಕ್ರಮೇಣ ಒಂದು ಕಡೆ ನೆಲೆನಿಂತು ತನ್ನ ವಾಸ್ತವ್ಯವನ್ನು ಹೂಡಿದನು. ಆಗ ಒಂದನ್ನು ಇನ್ನೊಂದರಿಂದ

ಬೇರ್ಪಡಿಸಲು, ಒಬ್ಬರಿಂದ ಮತ್ತೊಬ್ಬರನ್ನು ವಿಭಿನ್ನ ಎಂದು ಗುರುತಿಸಲು, ಅವರ ದೇಹದ ಆಕರ ಗಾತ್ರ, ಬಣ್ಣಗಳಿಗೆ ಅನುಗುಣವಾಗಿ, ವ್ಯಕ್ತಿನಾಮಗಳನ್ನು ಮತ್ತು ಸ್ಥಳದ ಭೌಗೋಳಿಕತೆಯನ್ನು ತಮ್ಮ ಆರಾಧ್ಯ ದೈವವನ್ನು ಗುರುತಿಸಿ ಅವರ ವಾಸ್ತವ್ಯದ ನೆಲೆಯನ್ನು ಗಟ್ಟಿಸಿಕೊಳ್ಳಲು ಒಂದು ನಿರ್ದಿಷ್ಟ ಹೆಸರುಗಳನ್ನು ಇಟ್ಟುಕೊಂಡನು.

## ೨.೨. ಸ್ಥಳನಾಮದ ಹುಟ್ಟು ಮತ್ತು ಬೆಳವಣಿಗೆ

ಸ್ಥಳನಾಮ, ಗ್ರಾಮನಾಮ, ಶಾಸನಗಳು, ಯಾವುದೇ ಒಂದು ಶಾಸ್ತ್ರೀಯ ವಿಷಯವನ್ನು ಅಧ್ಯಯನ ಮಾಡುವಾಗ ಅದರ ಹುಟ್ಟಿನ ಮೂಲವನ್ನು ತಿಳಿದುಕೊಳ್ಳುವುದು ಅತ್ಯವಶ್ಯಕ. ಅದರಂತೆಯೇ ಸ್ಥಳನಾಮದ ಹುಟ್ಟು ಕೂಡ ವಿಶಾಲವಾದ ವ್ಯಾಪಕ ಗುಣವನ್ನು ಹೊಂದಿದೆ. ಸ್ಥಳನಾಮಗಳ ಹುಟ್ಟಿನ ಮೂಲವನ್ನು ಹುಡುಕುತ್ತಾ ಹೋದರೆ, ಅಂದಿನ ಕಾಲದ ಜನರ ಜೀವನ ವಿಧಾನ, ಆಚಾರ–ವಿಚಾರ, ಸಂಸ್ಕೃತಿ, ಧರ್ಮ, ರಾಜಕೀಯ ಅಂಶಗಳು ಹೊರ ಹೊಮ್ಮುತ್ತವೆ.

### ಸ್ಥಳನಾಮದ ಹುಟ್ಟು

ಆದಿಮಾನವು ಅಲೆಮಾರಿ ಜೀವನವನ್ನು ನಡೆಸುತ್ತಿದ್ದನು. ಬೇಟೆಯಾಡಿ ಬದುಕುವುದು ಅವನ ಜೀವವ ವೃತ್ತಿಯಾಗಿತ್ತು. ತದನಂತರ ಬೇಟೆಗಾರಿಕೆಯಿಂದ ಕೃಷಿಯ ಕಡೆಗೆ ತನ್ನ ಚಟುವಟಿಕೆಯನ್ನು ಆರಂಭಿಸಿದ. ನೇಗಿಲ ಗೆರೆ, ಕಬ್ಬಿಣದ ತುದಿಗಳು ಮಾನವ ಒಂದೆಡೆ ನೆಲೆನಿಲ್ಲಲು, ನಿಂತಕಡೆ, ಗ್ರಾಮಗಳು ಸೃಷ್ಟಿಯಾಗಲು ಕಾರಣವಾಗಿವೆ. ಅಂದರೆ ಆದಿಮಾನವ ಬೇಟೆಯಿಂದ ಜೀವನ ಸಾಗಿಸುತ್ತಿದ್ದ. ಬೇಟೆಗಾಗಿ ಕಾಡಿನಲ್ಲಿ ಒಂದಡೆಯಿಂದ ಮತ್ತೊಂದು ಕಡೆಗೆ ಅಲೆಯುತ್ತಿದ್ದ. ಇಂತಹ ಹೊತ್ತಿನಲ್ಲಿ ಗ್ರಾಮಗಳ ಸೃಷ್ಟಿಯಾಗುವುದು ಸಾಧ್ಯವಾಗಿಲ್ಲ ಎನ್ನಬಹುದು. ಬೇಟೆಯೇ ಆಹಾರ ಗಳಿಕೆಯ ಮುಖ್ಯ ಮೂಲವಾಗಿದ್ದು ದಿನಕಳೆದಂತೆ ಬೇಟೆ ಕಷ್ಟ ಎನಿಸಿದಾಗ ಮತ್ತು ತನ್ನ ಆಹಾರವನ್ನು ಕೃಷಿಯಿಂದ ಪಡೆಯಬಹುದು ಎಂಬುದನ್ನು ತಿಳಿದು, ಆಹಾರ ಉತ್ಪಾದನೆಗಾಗಿ ವ್ಯವಸಾಯ ಮತ್ತು ಪಶುಪಾಲನೆಯನ್ನು ಕಂಡುಕೊಂಡು ಒಂದೆಡೆ ನೆಲೆನಿಂತ ಮೇಲೆ ಗ್ರಾಮ ಎನ್ನಬಹುದಾದ ತಾಣಗಳು ಸೃಷ್ಟಿಯಾಗಿವೆ. ಅಂದರೆ ಕ್ರಿಪೂ. ೨೫೦೦ರ ಆಸುಪಾಸಿನ ನವಶಿಲಾಯುಗದ ಕಾಲದಲ್ಲಿ ಗ್ರಾಮಗಳ ಹುಟ್ಟು ಪ್ರಾರಂಭವಾಗಿದೆ ಎನ್ನಬಹುದು. ಈ ಕಾಲಘಟ್ಟದ ಗ್ರಾಮದ ನೆಲೆಗಳು ಕರ್ನಾಟಕದಾದ್ಯಂತ ಕಂಡುಬರುತ್ತವೆ.

ಬಯಲು ಪ್ರದೇಶವಾದ ರಾಯಚೂರು ಜಿಲ್ಲೆಯ ಪಿಕ್ಲಿಹಾಳು, ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆ, ಸಂಗನಕಲ್ಲು, ಹಾವೇರಿ ಜಿಲ್ಲೆಯ ಹಳ್ಳೂರು, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಮೈಸೂರು ಜಿಲ್ಲೆಯ ಟಿ. ನರಸೀಪುರ, ಹೆಮ್ಮಿಗೆ, ಕೊಪ್ಪ ಮೊದಲಾದ ಕಡೆಗಳಲ್ಲಿ ನಡೆದಿರುವ ಉತ್ಖನನದಿಂದ ಜನತೆ ವ್ಯವಸಾಯ ಮತ್ತು ಪಶುಪಾಲನೆಗಾಗಿ ಒಂದೇ ಕಡೆ ನೆಲೆಸಿರುವ ಬಗ್ಗೆ ಅಂದಿನಿಂದ ಸ್ಥಳನಾಮಗಳು ಹುಟ್ಟಿಕೊಂಡಿರುವ ಬಗ್ಗೆ ಆಧಾರಗಳು ನಮಗೆ ಕಂಡುಬರುತ್ತವೆ.

ಮೊದಲನೇ ಶತಮಾನದಲ್ಲಿ ಕಬ್ಬಿಣದ ಬಳಕೆ ಪ್ರಾರಂಭವಾದದ್ದು, ಕಾಡನ್ನು ಕಡಿದು ವ್ಯವಸಾಯ ಮಾಡಲು ಮತ್ತು ಗ್ರಾಮಗಳು ಹುಟ್ಟಲು ಕಾರಣವಾಗಿದೆ. ಬೆಳೆಯ ರಕ್ಷಣೆಗಾಗಿ ಮಾನವ ಒಂದೆಡೆ ನೆಲೆ ನಿಲ್ಲಬೇಕಾಗಿದೆ. ಕ್ರಿ.ಪೂ. ಎಂಟನೆಯ ಶತಮಾನದಲ್ಲಿ ಕಬ್ಬಿಣದ ಬಳಕೆ ಪ್ರಾರಂಭಗೊಂಡಿತು. ಕಬ್ಬಿಣದ ಆಯುಧಗಳಿಂದ ನವೀನ ಕೃಷಿ ವಿಧಾನ ರೂಪಗೊಂಡು ಹೆಚ್ಚಿನ ಪ್ರಮಾಣದಲ್ಲಿ ದವಸಧಾನ್ಯಗಳನ್ನು ಬೆಳೆಯಲು ಅನುಕೂಲವಾಯಿತು. ಕೃಷಿಯ ಉತ್ಪಾದನೆಯಲ್ಲಾದ ಹೆಚ್ಚಳದಿಂದ ಜನತೆಯ ಐಹಿಕ ಸವಲತ್ತುಗಳ ಬೇಡಿಕೆ ಹೆಚ್ಚಾಯಿತು. ಹೀಗೆ ನಗರಗಳು ಹುಟ್ಟಿಕೊಂಡಿವೆ.

ಸ್ಥಳನಾಮ ಪರಿಕಲ್ಪನವೇ ಮೂಲ ಕಾರಣವೆಂದು ಹೇಳಬಹುದು. ಅನಂತರ ಒಕ್ಕಲಿಗರು ಫಲವತ್ತಾದ ನದೀ ತೀರದಲ್ಲಿ ಕ್ಷತ್ರಿಯರು ಅರಣ್ಯ-ಪರ್ವತಗಳಂತಹ ಇಕ್ಕಟ್ಟಾದ ಪ್ರದೇಶಗಳಲ್ಲಿ ಬ್ರಾಹ್ಮಣರು ಪವಿತ್ರ ಕ್ಷೇತ್ರಗಳಲ್ಲಿ ನಿಂತ ನೆಲೆಗಳೇ ಬೇರೆ ಬೇರೆ ವಾತಾವರಣ ಗ್ರಾಮಗಳಾಗಿ ಬೆಳೆದವು."[೭] ಇವುಗಳೇ ಜನವಸತಿ ಪ್ರದೇಶಗಳಾಗಿ ಇಂದು ಸ್ಥಳನಾಮಗಳಾಗಿ ರೂಪುಗೊಂಡಿವೆ.

ಇಂತಹ ಗ್ರಾಮಗಳಿಗೆ ಹೆಸರಿಡುವುದು ಅವು ಸೃಷ್ಟಿಯಾದ ಕಾಲಕ್ಕನುಗುಣವಾಗಿ ಗ್ರಾಮ ಸೃಷ್ಟಿಯಾದ ಆ ಸಂದರ್ಭದ ಭಾಷೆ, ಸಂಸ್ಕೃತಿ ಮೊದಲಾದವುಗಳನ್ನು ಸ್ಥಳನಾಮಗಳು ತಿಳಿಸುತ್ತಿದ್ದು, ಗ್ರಾಮನಾಮಗಳೇ ಗ್ರಾಮ ಸೃಷ್ಟಿಯ ಕಾಲವನ್ನು ನಿರ್ಧರಿಸಲು ಇರುವ ಪಳೆಯುಳಿಕೆಗಳಾಗಿವೆ.

ಕನ್ನಡ ನಾಡಿನಲ್ಲಿ ಕಂಡುಬರುವ ವಾರ್ಗಿಕಗಳಲ್ಲಿ ಪಟ್ಟಿ, ಪಾಡಿ, ಹಳ್ಳಿ, ಕೊಪ್ಪಲು, ಊರು, ಪಾಳ್ಯ, ಹುಂಡಿ, ಬೀಡು, ನಾಡು, ಗೂಡು, ಕೇರಿ, ಕೋಟೆ, ದುರ್ಗ, ಗಡ, ತೊರೆ, ಕಟ್ಟೆ, ಕೆರೆ, ಕೊಳ, ಕುಂಟೆ, ಗ್ರಾಮ, ನಗರ, ಪಟ್ಟಣ, ಕ್ಯಾಂಪ್, ಕಾಲೋನಿ, ಫಾರೆಸ್ಟ್ ಮುಂತಾದವು. ಇವುಗಳಲ್ಲಿ ಪಟ್ಟಿ, ಪಾಡಿ, ಬೀಡು, ಹಳ್ಳಿ, ಪಲ್ಲಿಯಂತಹ ವಾರ್ಗಿಕಗಳು ಸ್ವತಂತ್ರ ಗ್ರಾಮನಾಮಗಳಾಗಿ ಬಳಕೆಯಾಗಿರಬಹುದು. ಅನಂತರದಲ್ಲಿ ಭೌಗೋಳಿಕ ಅಂಶಗಳಾದ ಕೆರೆ, ಕಟ್ಟೆ, ತೊರೆ, ಬೆಟ್ಟ, ಗುಡ್ಡ, ಕೋಡು, ಕೊಳ, ದಿಬ್ಬ, ದಿಣ್ಣೆ, ಬಯಲು, ಆಲ, ದೇವಿ, ಗುಡಿಯಂತಹ ವಾರ್ಗಿಕಗಳು ನಿರ್ದಿಷ್ಟಗಳಾಗಿ ಮತ್ತು ವಾರ್ಗಿಕಗಳಾಗಿ ಎರಡೂ ಕಡೆಯೂ ಬಳಕೆಯಾಗಿವೆ. ಅನಂತರದಲ್ಲಿ ಈ ರೂಪದಲ್ಲಿ ಗ್ರಾಮನಾಮಗಳು ಅಸ್ತಿತ್ವ ಪಡೆದಿವೆ. ಕ್ಯಾಂಪ್, ಕಾಲೋನಿ, ಫಾರೆಸ್ಟ್‌ಗಳಂತಹ ಗ್ರಾಮನಾಮಗಳು ಇತ್ತೀಚಿಗೆ ಅಂದರೆ ೧೯ನೇ ಶತಮಾನದ ನಂತರ ಸೃಷ್ಟಿಯ ಗ್ರಾಮ ಮತ್ತು ಅದರ ಹೆಸರು ಎಂದು ನಿರ್ಧರಿಸಬಹುದು.

ರೈತವಾರಿ ಗ್ರಾಮಗಳು ಭಾರತದ ಮೂಲ ಸ್ಥಳನಾಮಗಳು. ಸಂಯುಕ್ತ ಗ್ರಾಮಗಳು ಆರ್ಯರ ಆಗಮನದ ನಂತರವೇ ಹುಟ್ಟಿಕೊಂಡವು. ಆರ್ಯರಲ್ಲಿ ಪೂರ್ವ ಪಿತೃಗಳ ಬಗ್ಗೆ ಬಲವಾದ ನಂಬಿಕೆಯಿದ್ದರಿಂದ ಗ್ರಾಮಗಳ ರಚನೆಯ ಮೇಲೆ ಅದು ಪ್ರಭಾವ ಬೀರಿತು. ಗ್ರಾಮಗಳು ಪಿತೃಪ್ರಧಾನ ಸಂಯುಕ್ತ ಕುಟುಂಬದ ಮಾದರಿಯಲ್ಲಿ ಬದಲಾವಣೆ ಹೊಂದಿದವು.

ಬಾಡೆನ್ ಪಾಡೆಲ್‌ರವರು ಈ ವಾದಕ್ಕೆ ಸಾಕ್ಷಿಯಾಗಿ ಸಂಯುಕ್ತ ಗ್ರಾಮಗಳು ಆರ್ಯರ ಪ್ರಭಾವವು ಉತ್ತರ ಭಾಗದಲ್ಲಿ ಹೆಚ್ಚಾಗಿದ್ದು, ದ್ರಾವಿಡರ ಪ್ರಾಬಲ್ಯವಿರುವ ದಕ್ಷಿಣ ಭಾರತದಲ್ಲಿ ರೈತವಾರಿ ಗ್ರಾಮಗಳು ಹೆಚ್ಚಾಗಿರುವುದನ್ನು ಎತ್ತಿ ತೋರಿಸುತ್ತವೆ.

**ಸ್ಥಳನಾಮಗಳ ಬೆಳವಣಿಗೆ**

ಮಾನವ ಒಂದೆಡೆ ನೆಲೆ ನಿಂತ ಮೇಲೆ ಆತ ಅನುಕೂಲಮುಖಿಯಾದ ಹಲವು ಕುಟುಂಬಗಳು ಒಂದೆಡೆ ನೆಲೆಸುವುದರಿಂದ ಇರುವ ಅನುಕೂಲಗಳನ್ನು ತಿಳಿದು ಹಲವು ಕುಟುಂಬಗಳು ಒಂದೆಡೆ ನೆಲಸತೊಡಗಿದವು. ವ್ಯವಸಾಯ ಮತ್ತು ಪಶುಪಾಲನೆ ಇವರ ಮುಖ್ಯ ಜೀವನಾಧಾರ ಕಸುಬಾಗಿತ್ತು. ವ್ಯವಸಾಯವನ್ನು ನಿರ್ವಹಿಸಲು ಬೇಕಾಗುವ ಸಲಕರಣೆಗಳು ಮತ್ತು ವ್ಯವಸಾಯದಿಂದ ಬರುವ ಉತ್ಪನ್ನಗಳನ್ನು ಸಂಸ್ಕರಿಸಿ ಉಪಯೋಗಿಸಲು ಒಂದೊಂದು ಕೆಲಸವನ್ನು ಒಂದೊಂದು ಕುಟುಂಬಗಳು ನಿರ್ವಹಿಸಲಾರಂಭಿಸಿದವು. ವ್ಯವಸಾಯಕ್ಕೆ ನೇಗಿಲು, ನೊಗ, ಕುಂಟೆ, ಹಲುಬೆ, ಎತ್ತಿನಗಾಡಿ ಮುಂತಾದ ವಸ್ತುಗಳ ತಯಾರಿಕೆಯಲ್ಲಿ ವಿಶೇಷ ಗಮನಹರಿಸಿದವನನ್ನು ಬಡಗಿ ಎಂದು, ದಿನನಿತ್ಯದ ಬಳಕೆಗಾಗಿ ವಿಶೇಷ ಗಮನಹರಿಸಿದವನನ್ನು ಕುಂಬಾರ ಎಂದು, ಪಶುಪಾಲನೆಯಲ್ಲಿ ವಿಶೇಷ ಗಮನಹರಿಸಿದವನನ್ನು ಗೊಲ್ಲ, ದನಗಾರ ಎಂದು, ಕೃಷಿಯಲ್ಲಿಯೇ ಹೆಚ್ಚು ಗಮನಹರಿಸಿದವನನ್ನು ಒಕ್ಕಲಿಗ, ಎಣ್ಣೆಕಾಳುಗಳಿಂದ ಎಣ್ಣೆ ತೆಗೆದು ಕೊಡುವವನ್ನು ತೈಲಿಗ (ಗಾಣಿಗ) ಎಂದು, ಹೀಗೆ ಒಂದೊಂದು ಉದ್ಯೋಗಗಳಲ್ಲಿ ಗ್ರಾಮದ ಜನತೆ ಪ್ರಾವೀಣ್ಯತೆ ಪಡೆದು ಮನೆತನದ ಉದ್ಯೋಗವನ್ನಾಗಿಸಿಕೊಂಡರು.

"ತನ್ನ ಮನೆತನದ ಉದ್ಯೋಗವನ್ನು ಆ ಮುಂದಿನ ವ್ಯಕ್ತಿ ಹಿಡಿದು ಸಾಗುತ್ತಿದ್ದ. ಹೀಗೆ ಈ ಎಲ್ಲಾ ಕಸುಬುದಾರರು ಗ್ರಾಮದ ಅವಶ್ಯಕತೆಯಿಂದ ಹುಟ್ಟಿಕೊಂಡವರಾಗಿದ್ದರು. ಅವೆಲ್ಲ ಒಂದೊಂದು ಜಾತಿಗಳಲ್ಲ. ಆದರೆ ಕಾಲಕ್ರಮೇಣದಲ್ಲಿ ಒಂದೊಂದು ಉದ್ಯೋಗವಾದರೂ ಒಂದೊಂದು ಜಾತಿ ಎಂದು ಪರಿಗಣಿಸುವಂತೆ ತೋರುತ್ತದೆ."[೮] ಈ ಕಸುಬುಗಳು ವಂಶಪಾರಂಪರ್ಯವಾದವು. ಗ್ರಾಮದಲ್ಲಿಯ ಬಡಗಿ, ಅಗಸ, ತೈಲಿಗ, ಬೆಸ್ತ, ಒಕ್ಕಲಿಗ, ಅಕ್ಕಸಾಲಿಗನಂತಹ ಪ್ರತಿಯೊಂದು ಕಸುಬುಗಳು ಗ್ರಾಮೀಣ ಜೀವನಕ್ಕೆ ಪೂರಕವಾಗಿದ್ದು ಎಲ್ಲಾ ಕಸುಬುಗಳ ಹಿನ್ನೆಲೆಯ ಜಾತಿಯ ಜನರು ಗ್ರಾಮಗಳಲ್ಲಿ ಇರಬೇಕಾದುದು ಅನಿವಾರ್ಯವಾಗುವಷ್ಟರಮಟ್ಟಿಗೆ ಹೋಗಿದೆ.

ಪ್ರತಿಯೊಂದು ಗ್ರಾಮದಲ್ಲೂ ಕುಂಬಾರಗೇರಿ, ಒಕ್ಕಲಿಗರ ಬೀದಿ, ಬ್ರಾಹ್ಮಣರ ಬೀದಿ, ಗಾಣಿಗರ ಬೀದಿ, ಬೆಸ್ತರ ಬೀದಿಗಳಂತಹುಗಳ ಜೊತೆಗೆ ಒಂದೊಂದು ಜಾತಿಯ ಕೇರಿಗಳನ್ನು ಕಾಣಬಹುದು. ಅಗಸರಹಳ್ಳಿ, ಕುಂಬಾರನಕೊಪ್ಪಲು, ದನಗನಹಳ್ಳಿ, ತೈಲಗನೂರುಗಳನ್ನು ಈ ಹಿನ್ನೆಲೆಯಲ್ಲಿಯೇ ಗಮನಿಸಬಹುದಾಗಿದೆ. ಆದರೆ ಗ್ರಾಮ ಜೀವನಕ್ಕೆ ಅನುಕೂಲವಾಗುವಂತೆ ಒಂದು ಗ್ರಾಮದಲ್ಲಿ ಪ್ರತಿಯೊಂದು ಜಾತಿಯವರು ಇರಬೆಕು.

ಒಂದು ಗ್ರಾಮವು ಪೂರ್ಣ ಗ್ರಾಮ ಎನಿಸಿಕೊಳ್ಳಬೇಕಾದರೆ ಅಲ್ಲಿ ಎಲ್ಲಾ ಜಾತಿಯ ಜನರು ವಾಸವಾಗಿರಬೇಕಾಗುತ್ತದೆ. ಇಲ್ಲವಾದರೆ ಅಂತಹ ಗ್ರಾಮಗಳಿಗೆ ಸ್ವತಂತ್ರವಾದ ಅಸ್ತಿತ್ವ ಇರುವುದಿಲ್ಲ. ಜನಸಂಖ್ಯೆಯ ಹೆಚ್ಚಳ ಸಂಪರ್ಕಗಳ ಬೆಳವಣಿಗೆ, ಒಬ್ಬರಿಂದ ಇನ್ನೊಬ್ಬರಿಗೆ ವಸ್ತುಗಳ ವಿನಿಮಯ, ಮಾನವನ ಅಭಿವೃದ್ಧಿಯ ಜೊತೆಗೆ ಗ್ರಾಮಗಳ ಬೆಳವಣಿಗೆಗೂ ಅನುಕೂಲವಾಗಿ ಹೊಸ ಗ್ರಾಮಗಳು ಸೃಷ್ಟಿಯಾಗುತ್ತವೆ.

ಈ ರೀತಿಯಾಗಿ ಗ್ರಾಮನಾಮಗಳೇ ಮುಂದೆ ಸ್ಥಳನಾಮಗಳಾಗಿ ಮಾರ್ಪಾಡನ್ನು ಹೊಂದಿದವು. ಗ್ರಾಮನಾಮದ ಸಂಕ್ಷಿಪ್ತ ರೂಪ ವಿಸ್ತಾರಗೊಂಡು ಸ್ಥಳನಾಮ ಶಾಸ್ತ್ರವಾಗಿ ಬೆಳವಣಿಗೆಯನ್ನು ಹೊಂದಿತು. ಗ್ರಾಮನಾಮವು ಕೇವಲ ವೃತ್ತಿ, ಕೃಷಿಗೆ ಅಷ್ಟೇ ಸೀಮಿತವಾಗಿತ್ತು. ಅದರ ಸ್ಥಳನಾಮವು ಅದರಾಚೆಗೂ ಬೆಳೆದು ನಿಂತಿತು.

ಸ್ಥಳನಾಮಗಳ ಹರವು ವಿಸ್ತಾರವಾಗುತ್ತಾ ಹೋಯಿತು. ಅದರ ಅಧ್ಯಯನಗಳು ಬೆಳೆದಂತೆಲ್ಲಾ ಅದು ವಿಶಾಲವಾದ ತನ್ನ ವ್ಯಾಪಕತೆಯನ್ನು ವಿಸ್ತರಿಸತೊಡಗಿತು. ಮಾನವ ಒಂದು ಕಡೆ ನೆಲೆನಿಂತ ಮೇಲೆ ತಾನು ಬದುಕಲಿಕ್ಕೆ ಏನೆಲ್ಲ ಅನುಕೂಲಗಳು ಬೇಕು ಅವುಗಳನ್ನು ಮಾಡಿಕೊಳ್ಳ ತೊಡಗಿದನು.

### ಸ್ಥಳನಾಮಗಳ ಮೂಲ ನೆಲೆ

ಪ್ರಕೃತಿ, ಭೌಗೋಳಿಕ ಪರಿಸರ, ಸಂಸ್ಕೃತಿ, ಐತಿಹಾಸಿಕ, ಪೌರಾಣಿಕ, ಕವಿಗಳು, ರಾಜಕೀಯ ವ್ಯಕ್ತಿಗಳು, ಪ್ರಸಿದ್ಧ ಸಮಾಜ ಸುಧಾರಕರು, ಜಾನಪದ-ಐತಿಹ್ಯಗಳು, ಜನಾಂಗ, ವೃತ್ತಿ, ವ್ಯಕ್ತಿನಾಮಗಳು, ರಾಜ-ರಾಣಿಯರು, ಮಾಂಡಲೀಕರು, ದೈವತ್ವದ ಪರಿಕಲ್ಪನೆ, ವ್ಯಕ್ತಿಯ ಬಣ್ಣ, ಆಕಾರ, ಗಾತ್ರ ಇವೆಲ್ಲ ಅಂಶಗಳ ಆಧಾರದ ಮೇಲೆ ಸ್ಥಳನಾಮಗಳು ಬೆಳವಣಿಗೆಯನ್ನು ಹೊಂದಿದವು.

**ಅ. ಪ್ರಕೃತಿ:** ಮರ, ಗಿಡ, ಬಳ್ಳಿ, ಸಸ್ಯಗಳು, ತರಕಾರಿಗಳು, ಪೊದೆ, ದಟ್ಟವಾದ ಅರಣ್ಯ ಇವುಗಳ ಆಧಾರದ ಮೇಲೆ ಸ್ಥಳನಾಮಗಳು ರೂಪಿತವಾಗಿರುತ್ತವೆ. ಆಯಾ ಪ್ರದೇಶದಲ್ಲಿ ವಿಪುಲವಾಗಿ ಸಿಗುವಂತಹ ಯಾವುದೇ ಒಂದು ವಸ್ತುವಾಗಿರಲಿ, ಅದು ಹೆಸರುವಾಸಿಯಾಗಿದ್ದರೆ ಆ ಪ್ರದೇಶಕ್ಕೆ ಅದರ ಹೆಸನ್ನೇ ಸೂಚಿಸುವುದು ಕಂಡುಬರುತ್ತದೆ.

ಉದಾ. ಮಾವು-ಮಾವಿನಹಳ್ಳಿ, ಮಾವಿನ ತೋಪು.

ನೇರಳೆ - ನೇರಲಕೆರೆ, ನೇರಲಗುಂದಿ

**ಆ. ಭೌಗೋಳಿಕ ಪರಿಸರ:** ಭೂಮಿಯ ಮೇಲೆ ನಮಗೆ ಭೌಗೋಳಿಕ ಪರಿಸರ ಪ್ರಕೃತಿ ಎನ್ನುವುದು ಒಂದು ವರದಾನವಾಗಿ ಪರಿಣಮಿಸಿದೆ. ಪ್ರಕೃತಿಯ ಸೌಂದರ್ಯವನ್ನು, ಭೌಗೋಳಿಕ ಪರಿಸರವನ್ನು ನರಮನುಷ್ಯನಿಂದ ಸೃಷ್ಠಿಸಲು ಅಸಾಧ್ಯ. ಇಂತಹ ಸೃಷ್ಟಿಯ ಆಗೋಚರವಾದ ಈ ಭೂಮಿಯ ಮೇಲೆ ಮನುಷ್ಯ ವಾಸಮಾಡಲಿಕ್ಕೆ ಅವನಿಗೆ ಯಾಗ್ಯವಾದ ಪ್ರದೇಶವನ್ನು

ಆಯ್ದುಕೊಂಡು ಅಲ್ಲಿ ವಾಸ ಮಾಡುತ್ತಾನೆ. ಅಂದರೆ ಅಲ್ಲಿ ಇರುವಂತಹ ಬೆಟ್ಟ–ಗುಡ್ಡ, ನದಿ–ಕಣಿವೆ, ಸಾಗರ–ಸಮುದ್ರ ಇವುಗಳು ಇರುವಂತಹ ಪ್ರದೇಶದಲ್ಲಿ ತಾನು ನೆಲೆನಿಂತು ಆ ಪ್ರದೇಶಕ್ಕೆ ಹೊಂದಿಕೊಳ್ಳುವಂತಹ ಹೆಸರನ್ನು ಕರೆದುಕೊಂಡನು.

ಉದಾ. ಬಂಡೆ– ಬಂಡೆಹಟ್ಟಿ, ಬಂಡೆತಿಮ್ಮಲಾಪುರ

ಸಾಗರ – ಸಾಗರ – ಕೋನಸಾಗರ

**ಇ. ಸಂಸ್ಕೃತಿ:** ಭಾರತ ದೇಶವು ಸಂಸ್ಕೃತಿಗೆ ಹೆಸರಾಗುವಂತಹ ದೇಶ. ಆದುದರಿಂದ ಇಲ್ಲಿನ ಜನಪದರು ಅವರ ಸಂಸ್ಕೃತಿಯ ಆಚಾರ–ವಿಚಾರಗಳನ್ನು ಬಿಟ್ಟುಬಿಡಲಾರರು. ಅದನ್ನು ಅವರು ದೈವತ್ವದ ಪರಿಕಲ್ಪನೆಯ ರೂಪದಲ್ಲಿ ನಂಬಿಕೊಂಡು ಬಂದವರು. ಅವರ ಹೆಸರುಗಳಲ್ಲಿಯೂ ಕೂಡ ಸಂಸ್ಕೃತಿಯನ್ನು ಹುಡುಕುತ್ತೇವೆ.

**ಈ. ಐತಿಹಾಸಿಕ:** ಅನೇಕ ರಾಜಮನೆತನಗಳು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿರುವುದರಿಂದ ಸ್ಥಳನಾಮದ ಹೆಸರನ್ನೇ ಇಟ್ಟುಕೊಂಡು ಅನೇಕ ರಾಜಮನೆತನಗಳು ಆಳ್ವಿಕೆಯನ್ನು ನಡೆಸಿವೆ.

ಉದಾ. ದೋರಸಮುದ್ರ – ದೋರ ಸಮುದ್ರದ ಹೊಯ್ಸಳು

ತಲಕಾಡು – ತಲಕಾಡಿನ ಗಂಗರು

**ಉ. ಪೌರಾಣಿಕ:** ಪೌರಾಣಿಕ ಮಹಾಕಾವ್ಯಗಳಲ್ಲಿ ಬರುವಂತಹ ವ್ಯಕ್ತಿಗಳ ಹೆಸರಿನ ಮುಖಾಂತರ ಸ್ಥಳನಾಮಗಳು ಉಗಮವಾಗಿವೆ.

ಉದಾ. ಹೋಚಿಬೋರಯ್ಯ – ಹೋಚಿಬೋರಯ್ಯ ಬಡಾವಣೆ

**ಋ. ಪ್ರಸಿದ್ಧ ಸಮಾಜ ಸುಧಾರಕರು:** ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಇವರುಗಳ ಹೆಸರಿನಲ್ಲಿ ಅನೇಕ ಊರು, ಹಳ್ಳಿ, ಕಾಲೋನಿ, ನಗರಗಳು ಸ್ಥಾಪನೆಯಾಗಿವೆ.

ಉದಾ. ಬಸವ– ಬಸವಪಟ್ಟಣ

ಗಾಂಧಿ – ಗಾಂಧಿನಗರ

**ಎ. ಜಾನಪದ ಐತಿಹ್ಯಗಳು:** ನಮ್ಮ ಸಮಾಜದಲ್ಲಿ ಮೌಖಿಖ ಪರಂಪರೆಗೆ ಬಹು ಸುಧೀರ್ಘವಾದ ಇತಿಹಾಸವಿದೆ. ಜನಪದರು ಹಿಂದಿನಿಂದಲೂ ನಂಬಿಕೊಂಡು ಬಂದಿರುವಂತಹ ನಂಬಿಕೆಗಳಿಂದಲೇ ಕೆಲವೊಂದು ಸ್ಥಳಗಳಿಗೆ ಜನಪದರು ಕಂಡುಕೊಂಡ ಪುಣ್ಯಪುರುಷರ ಹೆಸರುಗಳನ್ನು ಇಡಲಾಗಿದೆ.

ಉದಾ. ಜಟಂಗಿ ರಾಮೇಶ್ವರ, ರಾಮಗಿರಿ

**ಏ. ಜನಾಂಗ:** ಬುಡಕಟ್ಟುಗಳ (ನಾಯಕ, ಗೊಲ್ಲ, ಕುರುಬ) ಜನರು ತಮ್ಮದೇ ಆದ ಸಂಪ್ರದಾಯ, ಆಚಾರ–ವಿಚಾರಗಳಿಂದ ಬದುಕುತ್ತಿರುತ್ತಾರೆ. ಅವರು ತಮ್ಮ ಹಟ್ಟಿಯ ಸುತ್ತಲು

ಭದ್ರವಾಗಿ ಬೇಲಿಯನ್ನೊ, ಕಲ್ಲುಕಡ್ಡವನ್ನೊ ಕಟ್ಟಿಕೊಂಡು ವಿಶಿಷ್ಟ ಜೀವನ ಶೈಲಿಯೊಂದಿಗೆ ಬುದುಕುತ್ತಿರುತ್ತಾರೆ. ಹಟ್ಟಿ, ಪಾಡಿಗಳು, ಆಯಾ ಜನಾಂಗಕ್ಕೆ ಸೀಮಿತವಾಗಿರುತ್ತಿದ್ದವು.

ಉದಾ. ನಾಯಕ – ನಾಯಕನಹಟ್ಟಿ

ಕುರುಬ – ಕುರುಬರ ಹಟ್ಟಿ

ಗೊಲ್ಲ – ಗೊಲ್ಲರಹಟ್ಟಿ

**ಐ. ವೃತ್ತಿ:** ಸಮಾಜದಲ್ಲಿ ಕಂಡುಬರುವಂತಹ ಹಲವಾರು ವೃತ್ತಿಯ ಜನರು ತಮ್ಮದೇ ಆದಂತಹ ವೃತ್ತಿಯನ್ನು ಮಾಡಿಕೊಂಡು ಹೋಗುವರು. ಆ ವೃತ್ತಿಯ ಮುಖಾಂತರ ಆ ಊರಿನ ಸ್ಥಳನಾಮವನ್ನು ಗುರುತಿಸುವುದು.

ಉದಾ. ಕುಂಬಾರ – ಕುಂಬಾರನಹಳ್ಳಿ

ಕಂಚು – ಕಂಚುಗಾರನಹಳ್ಳಿ

ಶೆಟ್ಟಿ – ಶೆಟ್ಟಿ ಹಳ್ಳಿ

ನಾಯಕ – ನಾಯಕನಹಳ್ಳಿ

**ಒ. ವ್ಯಕ್ತಿನಾಮಗಳು:** ಒಂದು ಊರಿನಲ್ಲಿ ಕಂಡುಬರುವಂತಹ ವ್ಯಕ್ತಿ, ಹಟ್ಟಿ, ಆಡಿಯ ನಾಯಕರುಗಳ ಹೆಸರನ್ನು ಆ ಊರಿಗೆ ಇಡಲಾಗುತ್ತದೆ. ವ್ಯಕ್ತಿನಾಮಗಳು ಕೂಡ ಸ್ಥಳನಾಮಗಳಾಗಿ ಉಳಿದುಕೊಂಡು ಬಂದಿವೆ.

ಉದಾ. ಕಾಕ – ಕಾಕನೂರು

ಮಾಚ – ಮಾಚಗಾವುಂಡನಹಳ್ಳಿ

ಮಾದ – ಮಾದನಾಯಕನಹಳ್ಳಿ

**ಓ. ರಾಜ–ರಾಣಿಯರು:** ರಾಜರು ಆಳ್ವಿಕೆ ಮಾಡುವಂತಹ ಸಂದರ್ಭದಲ್ಲಿ ಆ ಸಂಸ್ಥಾನದ ವ್ಯಾಪ್ತಿಗೆ ಬರುವಂತಹ ಭೂಮಿಯನ್ನು ಯಾರಿಗಾದರೂ ಉಂಬಳಿಯಾಗಿ ಅಥವಾ ದಾನ–ದತ್ತಿಯಾಗಿ ಕೊಟ್ಟಂತಹ ಭೂಮಿ ಅಥವಾ ಸ್ಥಳದಲ್ಲಿ ಊರು ನಿರ್ಮಾಣ ಮಾಡಿದರೆ, ಆ ಊರಿಗೆ ದಾನ ಕೊಟ್ಟಂತಹ ರಾಜ–ರಾಣಿಯರ ಹೆಸರನ್ನು ಆ ಊರಿಗೆ ಇಡಲಾಗುತ್ತಿತ್ತು.

ಉದಾ. ಮದಕರಿನಾಯಕ – ಮದಕರಿನಾಯಕನ ಕೋಟೆ

ಚೆನ್ನವ್ವನಾಗತಿ – ಚೆನ್ನವ್ವನಾಗತಿಹಳ್ಳಿ

**ಔ. ಮಾಂಡಲೀಕರು:** ರಾಜರ ಆಜ್ಞೆಯ ಮೇರೆಗೆ ಚಿಕ್ಕ ಪುಟ್ಟ ಸಂಸ್ಥಾನವನ್ನು ನೋಡಿಕೊಳ್ಳುತ್ತಿದ್ದರು. ಅವರು ನೋಡಿಕೊಳ್ಳುತ್ತಿದ್ದಂತಹ ಆ ಪ್ರದೇಶಕ್ಕೆ ಅವರ ಹೆಸರೇ ಸ್ಥಳನಾಮವಾಗಿ ಮುಂದುವರೆದಿದೆ.

ಉದಾ. ಚಿಕ್ಕ ಗಾವುಂಡ – ಚಿಕ್ಕಗೊಂಡನಹಳ್ಳಿ

ಮಾಚ ಗಾವುಂಡ – ಮಾಚಗಾವುಂಡನಹಳ್ಳಿ

**೨೦. ದೈವತ್ವದ ಪರಿಕಲ್ಪನೆ:** ನಮ್ಮ ಜನರು ದೇವರು, ಧರ್ಮದ ವಿಚಾರದಲ್ಲಿ ಬಹಳ ನಂಬುಗೆಯುಳ್ಳವರು. ಅವರು ತಾವು ನಂಬಿಕೊಂಡು ಬಂದಿರುವ ದೈವದ ಹೆಸರಿನಲ್ಲಿ ಊರುಗಳನ್ನು ಕಟ್ಟಿಕೊಂಡು ಆ ಊರಿಗೆ ಅದೇ ಹೆಸರನ್ನು ಇಡುತ್ತಿದ್ದರು.

ಉದಾ. ಮಾರಮ್ಮ – ಮಾರಮ್ಮನಹಳ್ಳಿ

ಹನುಮಂತ – ಹನುಮಂತನಹಳ್ಳಿ

ಈ ಮೇಲಿನ ಅಂಶಗಳ ಆಧಾರದ ಮೇಲೆ ಸ್ಥಳನಾಮಗಳು ಕಾಲಮಾನಕ್ಕೆ ತಕ್ಕಂತೆ ಬದಲಾವಣೆಯನ್ನು ಹೊಂದುತ್ತಾ, ತನ್ನ ಮೂಲ ಸ್ಥಾನವನ್ನು ಉಳಿಸಿಕೊಂಡು ಬರುತ್ತಿವೆ.

"ಹೊಸ ನೀರು ಬಂದಾಗ ಹಳೆ ನೀರು ಕೊಚ್ಚಿಕೊಂಡು ಹೋಗುತ್ತದೆ" ಎನ್ನುವ ಮಾತಿನಂತೆ ಸ್ಥಳನಾಮಗಳು ನವನವೀನತೆಗೆ ಹೊಂದಿಕೊಂಡು ತನ್ನ ಹಳೆಯ ಸತ್ವವನ್ನು ಎಡೆಬಿಡದೆ ಮುಂದುವರಿಸಿಕೊಂಡು ಬರುತ್ತಿವೆ. ಸ್ಥಳನಾಮಗಳು ತನ್ನ ಮೂಲ ಅಸ್ತಿತ್ವಕ್ಕೆ ಧಕ್ಕೆ ಬಾರದ ರೀತಿಯಲ್ಲಿ ತನ್ನ ಬೆಳವಣಿಗೆಯನ್ನು ಮುಂದುವರಿಸಿಕೊಂಡು ಬಂದಿವೆ.

### ೨.೩. ಸ್ಥಳನಾಮಗಳ ವರ್ಗೀಕರಣ

ಸ್ಥಳನಾಮಗಳ ಅರ್ಥ, ಇತಿಹಾಸ, ಸ್ಥಳನಾಮಗಳ ಹುಟ್ಟು ಮತ್ತು ಬೆಳವಣಿಗೆಯಂತೇ ಸ್ಥಳನಾಮಗಳ ವರ್ಗೀಕರಣವು ಅಷ್ಟೇ ಪ್ರಮುಖವಾದ ವಿಷಯವಾಗಿದೆ. ಸ್ಥಳನಾಮ ವರ್ಗೀಕರಣವನ್ನು ಅನೇಕ ರೀತಿಯಾಗಿ ಮಾಡಬಹುದು. ಆಯಾಯ ವರ್ಗೀಕರಣಕ್ಕೆ ತಕ್ಕಂತೆ ಭೌಗೋಳಿಕ, ಚಾರಿತ್ರಿ, ಪ್ರಾಕೃತಿಕ ಅಂಶಗಳು ಪೂರಕವಾಗಿ ಕಂಡುಬರುತ್ತವೆ.

ಸ್ಥಳನಾಮಗಳ ವರ್ಗೀಕರಣವನ್ನು ವಿವಿಧ ವಿದ್ವಾಂಸರು ಈ ಕೆಳಗಿನಂತೆ ಹೇಳಿದ್ದಾರೆ.

೧. ಲ್ಯಾಂಬರ್ಟ್ ಮತ್ತು ಮೇರಿಯಾ ಪೈ: (American Place Names) ಎಂಬ ಗ್ರಂಥದಲ್ಲಿ ಸ್ಥಳನಾಮಗಳ ಹತ್ತು ವಿಧದ ವರ್ಗೀಕರಣವನ್ನು ಹೇಳಿದ್ದಾರೆ.

1. Descriptive Names
2. Association Names
3. Possessive Names
4. Incident Names
5. Commemorative Names
6. Commendaotry Names

7. Coined Names

8. Transfer and Shirt Names

9. Folk Etymology

10. Mistake Names

೨. ಜೆ.ಜೆ. ಯುಗ್ಲಿ: ಸ್ಥಳನಾಮಗಳ ಎರಡು ಪ್ರಕಾರಗಳನ್ನು ಹೇಳಿದ್ದಾರೆ.

೧. Natural Names - ಪ್ರಾಕೃತಿಕ ಸ್ವಭಾವ ಅಥವಾ ಗುಣಲಕ್ಷಣಗಳಿಂದ ನಿಷ್ಪನ್ನವಾದ ಸ್ವಾಭಾವಿಕ ನಾಮಗಳು.

೨. Kuttur Names (cultural names) ಸಂಸ್ಕೃತಿಯನ್ನು ಪ್ರತಿಬಿಂಬಿಸುವ ನಾಮಗಳು ಪ್ರಾಚೀನ ಕಾಲದಲ್ಲಿ ಮಾನವ ನಿಸರ್ಗವನ್ನು ದೈವೀ ಭಾವನೆಯಿಂದ ಕಾಣುತ್ತಿದ್ದನು. ಅವನು ಪ್ರಕೃತಿಗೆ ವಿಧೇಯನಾಗಿದ್ದು, ಪೂಜಿಸುತ್ತಿದ್ದದ್ದು ಸಹಜವೇ ಆಗಿದೆ.

೩. ಹಿರಾಲಾಲ್: Indian Antiquary (1931)

೧. ಮರಗಳ ಬೆಳವಣಿಗೆಗಿಂತ ಮುಂಚಿತವಾಗಿ ಸ್ಥಳಗಳಾಗಿ ಹೆಸರು ಕೊಟ್ಟುಕೊಂಡಿದ್ದರು. ೨. ಪ್ರಾಣಿ ಪಕ್ಷಿಗಳಿಂದ ರಚಿತವಾದವು.

೩. ದೇವತೆ– ದೇವರುಗಳಿಂದ ಕರೆಯಲ್ಪಡುವ ಸ್ಥಳನಾಮಗಳು ಮೂರನೇ ವರ್ಗದವೆಂದು ಇದು ಅಸಮಂಜಸ ವರ್ಗೀಕರಣವೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯ.

೪. ಕೆ.ಪಿ. ಪದ್ಮನಾಭ ಮೆನನ್: Same Place Names of Malbar 1932 ಎಂಬ ಲೇಖನದಲ್ಲಿ ಸ್ಥಳನಾಮ ವರ್ಗೀಕರಣ ಕುರಿತು ಹೇಳಿದ್ದಾರೆ

1. Toporraphical Condition

2. Artificial condition

3. Native soil Products

4. Temple

5. Ancient military strong holds

6. Cultural and Religious

7. Incidental

8. Trade culture

9. Profession of the people

10. Accidental Phenomena

೫. ಸಿ. ನಾರಾಯಣರಾವ್: ''A sutdy of place names in Anantapur District

1. Direction

2. Rocks

3. Big and Small

4. Old and New

5. Hill and Spring

6. Cold and hot

7. Channels

8. Forts

9. Home sheds

10. Heavenly bodies

11. Animal and Birds

12. Par of human body

13. Food

14. Profession

15. Family

16. Dynasty

ಈ ಮೇಲಿನ ವರ್ಗೀಕರಣ ಅಷ್ಟೇನು ಸಮಂಜಸವಲ್ಲವೆಂದು ವಿದ್ವಾಂಸರ ಅಭಿಪ್ರಾಯವಾಗಿದೆ."[೯]

''He has cited chromologicaly the pre-hisoric and historic evidence refected in the place names. The influences of Cholas, Chalukyas, Hoysalas, Yadavas, Vijayanagara and Muslim king and British rulers is noted. Also the impact of caste, creed, religion etc. is pointed out in the development of Villages''.[10]

೬. ರಾಮಚಂದ್ರ ಚಿಟ್ಟಿಯಾರ್: Place Names of selam District ಎಂಬ ಲೇಖನದಲ್ಲಿ ಭೌಗೋಳಿಕ ಅಂಶಗಳನ್ನೇ ಪ್ರಧಾನವಾಗಿಟ್ಟುಕೊಂಡು ಸ್ಥಳನಾಮ ವರ್ಗೀಕರಣವನ್ನು ಆರು ವಿಧದಲ್ಲಿ ತಿಳಿಸಿದ್ದಾರೆ.

1. Hill area: Chatta, Kunda, Kurna, Durga, Male etc.

2. Water sources: Aru, Nadi, eri, kuka, kere, Halla, Hole, Kanda etc.

3. Plains{ Nadu, Sthala, Mannu

4. Civi, life: Uru, Hatti, Palli, Pura.

5. Agriculture: Eru etc.

6. Religion: Eshwra.

೭. ಎಸ್.ಎಸ್. ರಾಮಚಂದ್ರಮೂರ್ತಿ: "A study of telugu place names" ಎಂಬ ಮಹಾಪ್ರಬಂಧದ ಪುಟ ೩೯-೪೦ ರಲ್ಲಿ ಸುಮಾರು ಒಂಬತ್ತು ಬಗೆಯ ಸ್ಥಳನಾಮ ವರ್ಗೀಕರಣವನ್ನು ಗುರುತಿಸಿದ್ದಾರೆ.

೧. ಭೌತಿಕ ಮತ್ತು ಭೌಗೋಳಿಕ ಲಕ್ಷಣಗಳಿರುವಂಥವು.

೨. ಸಸ್ಯಲೋಕದ ಹೆಸರುಗಳು

೩. ಪ್ರಾಣಿ ಜಗತ್ತಿನ ಹೆಸರುಗಳು

೪. ಧಾರ್ಮಿಕ ಸಂಗತಿಗಳು

೫. ಜನಾಂಗಿಕ ಅಭಿದಾನಗಳಿಂದ ಕೂಡಿರುವಂಥವು.

೬. ಚಾರಿತ್ರಿಕ ವೈಶಿಷ್ಟ್ಯವುಳ್ಳವು

೭. ವ್ಯಾಪಾರ, ವಾಣಿಜ್ಯ ಸಂಗತಿಗಳಿಂದ ಪ್ರಭಾವಿತವಾಗಿರುವಂಥವು.

೮. ಪ್ರಸಿದ್ಧ ವರ್ಗಗಳ ನಾಮದಿಂದ ಬಂದಂಥವು.

೯. ಸಂಕೀರ್ಣ ವಿಷಯಗಳಿಂದ ಬಂದಂಥವು ಈ ವರ್ಗೀಕರಣದಲ್ಲಿ ೮ ಮತ್ತು ೯ನೇ ಅಂಶಗಳು ಅಷ್ಟೇನು ಪ್ರಮುಖ ವರ್ಗೀಕರಣದ ಅಂಶಗಳಲ್ಲ. ಏಕೆಂದರೆ ಯಾವುದೇ ಪ್ರಸಿದಧ ನಗರದ ಹೆಸರು ವ್ಯಕ್ತಿಯ ಸಿದ್ಧಿ ಸಾಧನೆ ಮತ್ತು ವ್ಯಾಪಾರ ವಹಿವಾಟಿನ ಅಭಿವೃದ್ಧಿಯಿಂದ ಉದಯವಾಗಬಹುದೇ ವಿನಃ ಪ್ರಸಿದ್ಧ ನಗರಗಳಿಂದಲ್ಲ. ಒಂಬತ್ತನೆಯ ಅಂಶವಾದ ಸಂಕೀರ್ಣ ವಿಷಯಗಳು ಸ್ಥಳನಾಮಗಳು ವರ್ಗೀಕರಣಕ್ಕೆ ತಾಳೆಯೇ ಆಗುವುದಿಲ್ಲ ಉಳಿದ ಏಳು ರೀತಿಯ ವರ್ಗೀಕರಣ ಒಪ್ಪಬಹುದಾದಂಥವುಗಳು.

೮. ಎಸ್.ಕೆ. ಚಟರ್ಜಿ:

"೧. ಬುಡಕಟ್ಟು ಅಥವಾ ಜಾತಿಯ ಹೆಸರಿನಿಂದ

೨. ನೈಸರ್ಗಿಕ ಲಕ್ಷಣಗಳ ಹೆಸರುಗಳಿಂದ

೩. ಧಾರ್ಮಿಕ ಸಂಗತಿಗಳಿಂದ

೪. ವ್ಯಕ್ತಿ ಅಥವಾ ಘಟನೆಗಳ ನಾಮದಿಂದ

೫. ಹಳೆಯ ಹೆಸರುಗಳಿಂದ"[೧೧]

೯. ಎಚ್.ಡಿ. ಸಂಕಾಲಿಯ: "ಸ್ಥಳನಾಮ ಕ್ಷೇತ್ರದಲ್ಲಿ ದೀರ್ಘವಾದ ಅಧ್ಯಯನ ಮಾಡಿದ ಪ್ರಮುಖ ವ್ಯಕ್ತಿ. ಇರುವ ಏಳು ವಿಧವಾದ ಸ್ಥಳನಾಮ ವರ್ಗೀಕರಣವನ್ನು ತಮ್ಮ ಮಹಾಪ್ರಬಂಧದಲ್ಲಿ ಹೇಳಿದ್ದಾರೆ."[೧೨]

೧. ವ್ಯಕ್ತಿನಾಮಗಳಿಂದ

೨. ಘಟನೆಗಳಿಂದ

೩. ಸಂಪ್ರದಾಯ ಮತ್ತು ಮೌಢ್ಯಗಳಿಂದ

೪. ಭೌಗೋಳಿಕ ಲಕ್ಷಣದಿಂದ

೫. ಪ್ರಾಣಿ ಪಕ್ಷಿಗಳಿಂದ

೬. ಹೂ, ಹಣ್ಣು, ಮರ, ಬೆಳೆಗಳಿಂದ

೭. ಹಳೆಯ ಹೆಸರುಗಳಿಂದ

ಈ ವರ್ಗೀಕರಣ ಕೂಲಂಕಷವಾಗಿದ್ದು ಸ್ಥಳನಾಮ ವರ್ಗೀಕರಣಕ್ಕೆ ಮಹತ್ವ ತಂದುಕೊಟ್ಟಂತಾಗಿದೆ. ಇಲ್ಲಿ ಯಾವುದೇ ಆ ವ್ಯಾಪ್ತಿ ದೋಷಗಳಿಲ್ಲದಿರುವುದೊಂದು ವಿಶೇಷ.

೧೦. ಶಂಬಾ ಜೋಷಿ: ಕನ್ನಡ ಸ್ಥಳನಾಮಗಳ ಬಗ್ಗೆ ಕೆಲಸ ಮಾಡಿದ ಪ್ರಮುಖ ವ್ಯಕ್ತಿ "ಎಡೆಗಳು ಹೇಳುವ ಕಂನಾಡಕತೆ" ಎಂಬ ಕೃತಿಯಲ್ಲಿ ಸುಮಾರು ಇಪ್ಪತ್ತೆರಡು ಗುಂಪುಗಳನ್ನು ಹೇಳಿದ್ದಾರೆ. ಅವುಗಳು ಈ ಕೆಳಗಿನಂತಿವೆ.

೧. ಪ್ರಾಣಿಗಳಿಂದ ಬಂದವು

೨. ಗಿಡಗಂಟೆಗಳಿಂದ ಬಂದ ಹೆಸರು

೩. ದೇಹದ ಅಂಗಾಂಶಗಳಿಂದ ಬಂದ ಹೆಸರು

೪. ಬಳಗದವರಿಂದ ಬಂದ ಹೆಸರುಗಳು

೫. ಮನೆಗಳಿಂದ

೬. ದಿನಸುಗಳಿಂದ

೭. ಬಣ್ಣಗಳಿಂದ

೮. ಹರಳುಗಳಿಂದ

೯. ಬಂಗಾರದಿಂದ

೧೦. ಅಂಕೆಗಳಿಂದ

೧೧. ಗ್ರಹಾದಿಗಳಿಂದ

೧೨. ಮಳೆ ಮಿಂಚು ಮುಂತಾದವುಗಳಿಂದ

೧೩. ದಿಕ್ಕುಗಳಿಂದ

೧೪. ನೆಲದಿಂದ

೧೫. ಬೇಸಾಯದಿಂದ

೧೬. ಕಾಲದಿಂದ

೧೭. ಚಿಕ್ಕ, ಸಣ್ಣ, ದೊಡ್ಡ

೧೮. ಕೂಡಿಕೆಯಿಂದ

೧೯. ದೇವತಾದಿಗಳಿಂದ

೨೦. ಜನಗಳಿಂದ

೨೧. ವ್ಯವಸಾಯ ಉದ್ಯೋಗ ಅಧಿಕಾರಿಗಳಿಂದ

೨೨. ವ್ಯಕ್ತಿಗಳಿಂದ ಬಂದವು.

೧. ಪುರಾತನ ಋಷಿಗಳಿಂದ

೨. ರಾಜಕೀಯ ಮತ್ತು ಸಾಮಾಜಿಕ

೩. ಧಾರ್ಮಿಕ"[೧೩] ಎಚ್.ಡಿ. ಸಂಕಾಲಿಯ ಅವರು ಈ ರೀತಿಯಾಗಿ ಹೇಳಿದ್ದಾರೆ.

"ಈ ಪಟ್ಟಿ ಉದ್ದವಾಗಿ ಕಂಡರೂ ಅತಿವ್ಯಾಪ್ತಿ ದೋಷದಿಂದ ಮುಕ್ತವಾಗಿ ಬಹುಮಟ್ಟಿಗೆ ವೈಜ್ಞಾನಿಕವಾಗಿದೆಯೆಂದು ಹೇಳಬಹುದು. ಕುರುಬರಹಗಳ ಪ್ರಾಣಿಗಳ ಗುಂಪಿನಲ್ಲಿರುವುದಕ್ಕಿಂತ ಜನಗಳ ಗುಂಪಿನಲ್ಲಿದ್ದರೆ ಹೆಚ್ಚು ಉಚಿತವಾಗುತ್ತಿತ್ತು. ಹರಳು ಬಂಗಾರವನ್ನು ಒಂದೇ ವರ್ಗದಲ್ಲಿ ಸಮೀಕರಿಸಬಹುದಿತ್ತು. ಬೇಸಾಯದ ವಿಷಯಗಳಿಗೆ ಸಂಬಂಧಿಸಿದ ಹೆಸರುಗಳನ್ನು ವ್ಯವಸಾಯದ ಮಾರ್ಗದಲ್ಲಿಯೇ ಸೇರಿಸಬಹುದಿತ್ತು. ಮಳೆ ಮಿಂಚು ಮುಂತಾದವುಗಳಿಂದ ಎಂಬುದಕ್ಕೆ ಬದಲಾಗಿ 'ನಿಸರ್ಗ ಸಂಬಂಧವಾದ ಹೆಸರುಗಳಿಂದ' ಎಂಬುದಾಗಿ ನಾಮಕರಣ ಮಾಡಬಹುದಿತ್ತು. ೧೮ ಮತ್ತು ೧೯ನೆಯ ವರ್ಗಗಳಿಗೆ ಕ್ರಮವಾಗಿ ಭೌಗೋಳಿಕ ಲಕ್ಷಣಗಳಿಂದ ಮತ್ತು ಪೌರಾಣಿಕ ಸಂಗತಿಗಳಿಗೆ ಎಂದು ಹೆಸರು ಕೊಟ್ಟಿದ್ದರೆ ಹೆಚ್ಚು ಸಮರ್ಪಕವಾಗಿರುತ್ತೆಂದು"[೧೪] ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

೧೧. ಇಕ್ವಾಲ್: Introduction to the Oxford dictionary of English place names ಎಂಬ ಆಗ್ಲ ಸ್ಥಳನಾಮ ನಿಘಂಟಿನಲ್ಲಿ ನಾಲ್ಕು ಬಗೆಯ ವರ್ಗೀಕರಣವನ್ನು ಹೇಳಿದ್ದಾರೆ.

1. Folk names or tribal names

2. Habitation names proper

3. Place names which denote a difined are of erround a piece of slat land in a river bed an enclosure or an open plan in a wood.

4. Original natural names i.e., names denoting rivers, strems, ponds, fords, lakes, etc"[15]

೧೨. ಕೆ.ಬಿ. ಹೊಲ್ಕಾರ್: "Systematic study of place names" ಎಂಬ ಲೇಖನದಲ್ಲಿ ಹಳ್ಳಿ-ನಗರ, ನದಿ-ನಾಲೆಬೆಟ್ಟ ಗುಡ್ಡ, ಬೀದಿ-ವೃತ್ತಗಳಿಗೆ ಸಂಬಂಧಿಸಿದ ಹಾಗೆ ವರ್ಗೀಕರಿಸಿದ್ದಾರೆ.

೧೩. ವೈ.ಬಿ. ಗಂಗಾಧರರಾವ್: "A note on place name study" ಎಂಬ ಲೇಖನದಲ್ಲಿ ಏಳು ಬಗೆಯ ಸ್ಥಳನಾಮಗಳ ಗುಂಪುಗಳನ್ನು ಹೇಳಿದ್ದಾರೆ.

1. Discriptive names

2. Associative names

3. Incident names

4. Possessive names

5. Commenorative names

6. Commeendatory names

7. Folk Exymology"[16]

ಇವರ ವರ್ಗೀಕರಣವು ವರ್ಣನೆ, ಸಂಯೋಜನೆ, ಸಹಾಯಕ ಘಟನೆ, ಸ್ವಾಧೀನಾನುಭವ, ಪ್ರಖ್ಯಾತ ಸ್ಮಾರಕೋತ್ಸವ, ಅರ್ಪಣಾತ್ಮಕ ಮತ್ತು ಜಾನಪದೀಯ ನಿಷ್ಪತ್ತಿಯ ಬಗ್ಗೆ ಒತ್ತಿ ಹೇಳಲಾಗಿದೆ.

೧೪. ಪ್ರೊ.ದೇ. ಜವರೇಗೌಡ: ಸ್ಥಳನಾಮಗಳ ದ್ವಿತೀಯ ಘಟಕಗಳನ್ನಾಧರಿಸಿ ಹತ್ತು ವಿಧಗಳಲ್ಲಿ ಸ್ಥಳನಾಮ ವರ್ಗೀರ್ಕರಣವನ್ನು ತಿಳಿಸಿದ್ದಾರೆ.

೧. ವಸತಿ ಸೂಚಿಸುವ ಘಟಕಗಳು: ಹಳ್ಳಿ, ಊರು, ಪುರ, ವಾಡಿ, ಬೀಡು, ದೊಡ್ಡಿ, ಹಟ್ಟಿ, ಹಂದಿ, ಗೂಡು, ಬೀದಿ, ಹಂದಿ.

೨. ತಿಟ್ಟು, ಬೆಟ್ಟ, ಕಾಡು, ಕಲ್ಲುಗಳನ್ನು ಸೂಚಿಸುವ ಘಟಕಗಳು: ಕುಪ್ಪೆ, ಕೊಪ್ಪಲು, ಕುಂದ, ಬೆಟ್ಟ, ಮಲೆ, ಗಟ್ಟ-ಘಟ್ಟ, ಕೋಡು, ಕಲ್/ಕಲ್ಲು, ಗುಂಡ್ಲು, ಕಾಡು, ಕುಮರಿ

೩. ಜಲಸೂಚಕ ಘಟಕಗಳು: ಕೆರೆ, ಕಟ್ಟೆ, ಕೊಳ, ಸಮುದ್ರ, ಅಂಬುದಿ, ಗುಂಡಿ, ತೊರೆ, ಕೂಡ್ಲು, ಕೋಡಿ, ಮೊಳೆ.

೪. ಭೌಗೋಳಿಕ ಲಕ್ಷಣಗಳನ್ನು ಸೂಚಿಸುವಂಥವು: ಹಂತ, ಕಾವಲ್, ಬಾಳು, ಹಾಳು, ಕಾಳು, ಮಾಳು, ಸಾಲ್, ಮೂಲೆ.

೫. ಜಾತಿ, ಕುಲಧರ್ಮ ಸೂಚಕ: ಮಂಗಲ, ಅಗ್ರಹಾರ, ಗುಡಿ, ಚತ್ರ.

೬. ವ್ಯಾಪಾರ ಕೇಂದ್ರಗಳನ್ನು ಹೇಳುವಂಥವು: ಪಟ್ಟಣ, ಪಟ್ಣ, ನಗರ, ಪೇಟೆ, ಸಂತೆ.

೭. ಸೈನಿಕ ಕೇಂದ್ರಗಳು, ಕೋಟೆಗೆ ಸಂಬಂಧಿಸಿದವು: ಪಾಳ್ಯ, ಕೋಟೆ.

೮. ಸಸ್ಯಜಾತಿಗೆ ಸಂಬಂಧಿಸಿದವು: ಆಲ, ಉಗನಿ, ಮತ್ತಿ, ನೇರಳೆ, ಮಾವು, ಜಾಲಿ, ಬೇಲ, ಜಾಜಿ, ವಲ್ಲಿ, ನಲ್ಲಿ.

೯. ಪ್ರಾಣಿಸೂಚಕ: ಸೂಗೆ, ನವಿಲು, ಹುಲಿ, ಕರಡಿ, ಬಸವ, ಎಮ್ಮೆ.

೧೦. ಸಂಕೀರ್ಣ ಘಟಕಗಳು: ತಲೆಬಾಗಿಲು, ಗುಂಬ–ಗುಂಬೆ, ಗಾಣ, ಕುಣಿಕೆ, ಸೊಡ್ಲು ಮತ್ತು ಏಣಿ"[೧೭]

ಇವುಗಳಷ್ಟೆ ಅಲ್ಲದೆ ಗಾವ್, ಗಾಂ, ಗೆ, ಹುಂಡಿ, ದುರ್ಗ, ವಾರ, ಗಂಟೆ, ಏಳು, ಬಾಗಿಲು, ತಕ್ಕೆ, ಆಣ, ಇಲು, ಅಡಿ, ಕಾಲು, ಗಾಲು ಇತ್ಯಾದಿ ದ್ವಿತೀಯ ಘಟಕದ ಪ್ರತ್ಯಯಗಳ ಗ್ರಾಮನಾಮಗಳು ಕರ್ನಾಟಕದಾದ್ಯಂತ ಕಂಡುಬರುತ್ತವೆ.

ಇವುಗಳ ಪರಿಶೀಲನೆಯಿಂದ ತಿಳಿಯುವ ಪ್ರಮುಖ ಸ್ವರೂಪವೇನೆಂದರೆ ಪ್ರಾಕೃತಿಕ ಹಾಗೂ ಭೌಗೋಳಿಕ ಅಂಶಗಳು ಪ್ರಧಾನ ಪಾತ್ರವಹಿಸಿದರೂ, ಎರಡನೇ ಅಂಶಗಳಾದ ಸಾಂಸ್ಕೃತಿಕ ವರ್ಗದ ಸ್ಥಳನಾಮಗಳ ಘಟಕಗಳು ಭಿನ್ನ ಭಿನ್ನ ಪ್ರದೇಶಗಳಿಗನುಗುಣವಾಗಿ ಗೋಚರಿಸುತ್ತವೆ.

ಅಲ್ಲದೆ ಸ್ಥಳನಾಮ ವರ್ಗೀಕರಣದಿಂದ ಕ್ರಿಯೆಯಿಂದ ಸ್ಥಳನಾಮ ಘಟಕಗಳ ವಿವಿಧ ಮಜಲುಗಳ ಸಿದ್ದರೂಪ ಇಡಿಯಾಗಿ ದೊರೆಯುತ್ತದೆ. ಈ ಮೇಲಿನಂತೆ ವರ್ಗೀಕರಿಸುವುದೇ ಸಂಶೋಧನೆಯಿಂದ ಮಾಡಬಹುದಾದ ವರ್ಗೀಕರಣದ ಸ್ಥೂಲಚಿತ್ರ ಎಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ಆರ್ಕೆ ಮಣಿಪಾಲ, ತುಳುನಾಡ ಸ್ಥಳನಾಮಗಳು, ಪುಟ–೧.

೨. ಅದೇ ಪುಟ–೪

೩. ಅದೇ ಪುಟ–೪

೪. ಚನ್ನಕ್ಕ ಪಾವಟೆ, ಶಾಸನ ಸಂಜೀವಿನಿ, ಪುಟ–೧೫೨.

೫. ಜಾಜಿ ದೇವೇಂದ್ರಪ್ಪ, ಆಂಧ್ರ ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು, ಪುಟ–೧೧.

೬. ದೇ.ಜ.ಗೌ. ಸ್ಥಳನಾಮ ವ್ಯಾಸಂಗ, ಪುಟ–೧೬.

೭. ಎಂ.ಎಂ. ಕಲಬುರ್ಗಿ, ಕನ್ನಡ ನಾಮ ವಿಜ್ಞಾನ, ಪುಟ–೫೬.

೮. ಕನ್ನಡ ವಿಷಯ ವಿಶ್ವಕೋಶ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೫೩೧.

೯. ಕೇತು ವಿಶ್ವನಾಥರೆಡ್ಡಿ, ಕಡಪ ಊರ್ಲ ಪೇರ್ಲು, ಪುಟ–೫೯.

೧೦. ಆರ್ಕೆ ಮಣಿಪಾಲ, ತುಳುನಾಡು ಸ್ಥಳನಾಮಗಳು, ಪುಟ–೧೮.

೧೧. ಅದೇ ಪುಟ–೨೦.

೧೨. ಜಾಜಿ ದೇವೇಂದ್ರಪ್ಪ, ಆಂಧ್ರ ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು, ಪುಟ–೫೬.

೧೩. ಶಂಬಾ ಜೋಷಿ, ಎಡೆಗಳು ಹೇಳುವ ಕಂನಾಡಕತೆ, ಪುಟ–೧೬–೩೪.

೧೪. ದೇ.ಜ.ಗೌ. ಸ್ಥಳನಾಮ ವ್ಯಾಸಂಗ, ಪುಟ–೭೨.

೧೫. ಎಸ್.ಎಸ್. ರಾಮಚಂದ್ರಮೂರ್ತಿ, ತೆಲುಗು ಸ್ಥಳನಾಮಗಳ ಅಧ್ಯಯನ, ಪುಟ–೬.

೧೬. ಆರ್ಕೆ ಮಣಿಪಾಲ, ತುಳುನಾಡು ಸ್ಥಳನಾಮಗಳು, ಪುಟ–೨೨.

೧೭. ದೇ.ಜ.ಗೌ. ಸ್ಥಳನಾಮ ವ್ಯಾಸಂಗ, ಪುಟ–೭೭.



# ಅಧ್ಯಾಯ: ಮೂರು

# ಮೊಳಕಾಲ್ಮೂರು ತಾಲ್ಲೂಕಿನ ಪರಿಸರ

ಒಂದು ದೇಶದ ನಿಜವಾದ ಇತಿಹಾಸವೆಂದರೆ, ಆ ಜನತೆಯ ಇತಿಹಾಸ. ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆಗಳು, ಅದರ ಜೀವನ ಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ. ಇದನ್ನು ಸಾಂಸ್ಕೃತಿಕ ಅಧ್ಯಯನವೆಂದೂ ಸಹ ಕರೆಯಬಹುದು. ನಮ್ಮ ದೇಶ ನಮ್ಮ ಸಂಸ್ಕೃತಿ ಎಂಬ ಮಾತುಗಳು ಮೇಲ್ನೋಟಕ್ಕೆ ಒಂದೇ ಅನ್ನಿಸಿದರೂ ಸೂಕ್ಷ್ಮವಾಗಿ ನೋಡಿದಾಗ ಅವು ಒಂದೇ ಅಲ್ಲ ಹಗ್ಗದ ರಚನೆಯಂತೆ ಹಲವು ಎಳೆಗಳಿಂದ ಅವು ಒಂದೇ ಎನಿಸುತ್ತವಷ್ಟೆ. ಹಾಗೆ ನೋಡಿದರೆ ಪ್ರಧಾನವಾದ ಅಧ್ಯಯನವೇ ಬಹುಮುಖ್ಯವಾಗಿದ್ದ ಈ ನೆಲದಲ್ಲಿ ಉಪಧಾರೆಗಳ ಕುರಿತು ಅಧ್ಯಯನ ನಡೆದಿಲ್ಲ. ಈ ಅಲಕ್ಷಿತ ಸ್ಥಳನಾಮಗಳ ಅಕ್ಷರ ಲೋಕದಿಂದ ಬಹುದೂರ ಉಳಿದಿದ್ದ ಕಾಲ ಒಂದಿತ್ತು. ಹೀಗೆ ಉಪಸಂಸ್ಕೃತಿ–ಪರ್ಯಾಯ ಸಂಸ್ಕೃತಿ ಎಂದೆಲ್ಲ ಕರೆಯಿಸಿಕೊಂಡು ಹತ್ತು ಹಲವು ದೃಷ್ಟಿಕೋನಗಳಿಂದ ಮಹತ್ವ ಪಡೆದಿವೆ.

## ೩.೧. ಭೌಗೋಳಿಕ ಪರಿಸರ

ಸಾಮಾನ್ಯವಾಗಿ 'ಮೊಳಕಾಲ್ಮೂರು' ಎಂಬ ಹೆಸರು ದೇಹದ ಅಂಗಾಂಗಗಳಿಂದ ಬಂದ ಹೆಸರು ಅಥವಾ "ಜಲ ಸಸ್ಯದಿಂದ ಬಂದಿರಬಹುದು."[೧] ಮೊಳಕಾಲ್ಮೂರು ಪಕ್ಕದಲ್ಲಿಯೇ 'ಕೂಗುಬಂಡೆ'ಯೊಂದು ಇವೆ. ಇದಕ್ಕೆ 'ಜೋಗಪ್ಪನ ಗುಡ್ಡ' ಹಾಗೂ 'ಮೊಳಗುವ ಕಲ್ಲು' ಎನ್ನುತ್ತಾರೆ. ಮೊಳಗುವ ಕಲ್ಲಿನ ಊರು ಮೊಳಕಾಲ್ಮೂರು ಹೆಸರಿಗೆ ಕಾರಣವಾಗಿರಬಹುದು. ಹಾಗೆಯೇ ಮೊಳಕಾಲ್ಮೂರುನಿಂದ ರಾಯದುರ್ಗದವರೆಗೂ ಗ್ರಾನೈಟ್ ಶಿಲೆಯ ಬೆಟ್ಟ ಗುಡ್ಡಗಳಿವೆ. ಒಣಕಲ್ಲಿನಿಂದ ಕೂಡಿದ ಊರು 'ಒಳಕಲ್ಲು ಊರು' ಎಂಬುದು ಮೊಳಕಾಲ್ಮೂರು ಆಗಿರಲೂಬಹುದು.

ಅಲ್ಲದೆ ಈ ಊರಿನ ಉತ್ತರಕ್ಕಿರುವ ಬೆಟ್ಟದ ಮೇಲಿನ ಕೋಟೆಯನ್ನು ವಶಪಡಿಸಿಕೊಳ್ಳಲು, ಹಿಂದೆ ರಾಜಮಹಾರಾಜರ ಕಾಲದಲ್ಲಿ ಶತ್ರು ರಾಜರು (ಸೈನಿಕರು) ಬೆಟ್ಟವನ್ನು ಅತಿಕ್ರಮಿಸುದಂತೆ

ಮೂರನೆಯ ಸಾಲಿನ ಕೋಟೆಯ ಕೆಳಭಾಗದ ಅತ್ಯಂತ ವಿಶಾಲವಾದ, ಇಳಿಜಾರಾದ ಬಂಡೆಗೆ ಎಣ್ಣೆ ಸವರಿ, ಅದರ ಮೇಲೆ ರಾಗಿ ಅಂಟಿಸುತ್ತಿದ್ದರಂತೆ. ಕೋಟೆ ಹತ್ತಲು ಉಪಕ್ರಮಿಸುವ ಸೈನಿಕರು ಕಾಲುಜಾರಿ ಮೊಳಕಾಲು ಮುರಿಯುವಂತೆ ಬಿದ್ದು ಹತರಾಗುತ್ತಿದ್ದರಂತೆ. ಈ ಊರಿಗೆ 'ಮೊಣಕಾಲುಮುರಿ' ಮೊಳಕಾಲ್ಮೂರಿ, ನಂತರದ ದಿನಗಳಲ್ಲಿ 'ಮೊಳಕಾಲ್ಮೂರು' ಎಂಬ ಹೆಸರು ಬಂದಿದೆ ಎಂದು ಸ್ಥಳೀಯ ಐತಿಹ್ಯವಿದೆ. ಇನ್ನೊಂದು ಅಭಿಪ್ರಾಯ ಹೀಗಿದೆ. "ಈ ಪ್ರಾಂತ್ಯವನ್ನು ಆಳಿದ ರಾಜನೊಬ್ಬ ತನ್ನ ಪೂರ್ಣ ಗರ್ಭಿಣಿಯಾದ ಪತ್ನಿಯೊಂದಿಗೆ ವನವಿಹಾರಕ್ಕೆ ಹೋದ ಸಂದರ್ಭದಲ್ಲಿ ಆಕೆ ಅಲ್ಲಿನ ಒಂದು ಮರದ ಕೆಳಗೆ ಸುಕುಮಾರನನ್ನು ಹೆತ್ತಳಂತೆ. ಅವನಿಗೆ ಹಣೆಯಲ್ಲಿ ಕಣ್ಣಿದ್ದುದರಿಂದ ಮುಂದೆ ಅವನಿಗೆ ಪಟ್ಟಕಟ್ಟುವಾಗ ಬಾಸಿಂಗವನ್ನು ಮೊಣಕಾಲಿಗೆ ಕಟ್ಟಿದರಂತೆ. ಈ ಪ್ರಸಂಗದಿಂದಾಗಿ ಈ ಊರಿಗೆ ಮೊಳಕಾಲ್ಮೂರು ಎಂದಾಯಿತೆನ್ನಲಾಗಿದೆ. ಈ ಹೇಳಿಕೆಯು ಪ್ರಾಯಶಃ ತ್ರಿಣೇತ್ರ ಕದಂಬನಿಗೆ ಅನ್ವಯಿಸುತ್ತದೆ ಎನ್ನಬಹುದು."[೨] ಆದರೆ ಈ ಮೇಲಿನ ಹಳೇಕೆಗಳಿಗೆ ಯಾವುದೇ ರೀತಿಯ ಪುರಾತತ್ವೀಯ ಅಥವಾ ಸಾಹಿತ್ಯಿಕ ಆಧಾರಗಳಿಲ್ಲ. ಇಂದು ಮೊಳಕಾಲ್ಮೂರು ತಾಲ್ಲೂಕು ಕೇಂದ್ರವಾಗಿದ್ದು, ಈ ತಾಲ್ಲೂಕು ಚಿತ್ರದುರ್ಗ ಜಿಲ್ಲೆಯ ಈಶಾನ್ಯ ಭಾಗದಲ್ಲಿ 'ಒಂಟೆ' ಅಥವಾ 'ಜಿರಾಫೆ'ಯ ಕತ್ತಿನಂತೆ ಉದ್ದಕ್ಕೆ ಚಾಚಿಕೊಂಡಿದೆ. ಕರ್ನಾಟಕದ ಮಧ್ಯಬಿಂದುವಿನಂತಿರುವ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಮೊಳಕಾಲ್ಮೂರು ತಾಲ್ಲೂಕು ಒಂದು. ಈ ಪ್ರದೇಶದ ಅನಾವೃಷ್ಠಿ, ಅಭಾವಗಳಿಗೆ ಹೆಸರಾದ ಹಿಂದುಳಿದ ತಾಲ್ಲೂಕಾಗಿದೆ. ಉತ್ತರ ಅಕ್ಷಾಂಶ ೧೪°೪° ರಿಂದ ೧೫° ೦೨° ಮತ್ತು ಪೂರ್ವ ರೇಖಾಂಶ ೭೬°-೪೧° ರಿಂದ ೭೭°-೦೧° ಚಾಚಿಕೊಂಡಿದೆ. ಈ ತಾಲ್ಲೂಕಿನ ಪೂರ್ವಕ್ಕೆ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲ್ಲೂಕು, ಪಶ್ಚಿಮ ಮತ್ತು ಉತ್ತರಕ್ಕೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಮತ್ತು ಸೊಂಡೂರು ತಾಲ್ಲೂಕುಗಳನ್ನು ಹಾಗೂ ದಕ್ಷಿಣಕ್ಕೆ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕುಗಳನ್ನು ಮೇರೆಗಳಾಗಿ ಹೊಂದಿದೆ. ಈ ತಾಲ್ಲೂಕಿನ ವಿಸ್ತೀರ್ಣ ೭೩೭ ಚದರ ಕಿ.ಮೀಟರಗಳು.

ಮೊಳಕಾಲ್ಮೂರು ತಾಲ್ಲೂಕಿನ ಸುತ್ತಮುತ್ತಲಿನ ಪ್ರದೇಶದ ಹಲವಾರು ನೆಲೆಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಅನೇಕ ಪ್ರಾಚ್ಯಾವಶೇಷಗಳು ದೊರೆತಿವೆ. ತಾಲ್ಲೂಕಿನಲ್ಲಿ ಯಾವುದೇ ದೊಡ್ಡ ನದಿಗಳು ಹರಿಯದಿದ್ದರೂ ಅಲ್ಲಲ್ಲಿ ಕೆರೆ, ಕುಂಟೆ, ಕಾಲುವೆ, ಹಳ್ಳ ಮುಂತಾದ ತುಂಗಭದ್ರಾ ನದಿಯ ಮುಖ್ಯ ಉಪನದಿಯಾದ ಚಿನ್ನಹಗರಿ ಹರಿಯುತ್ತದೆ. ವೇದಾವತಿ ನದಿಯು ಮೊಳಕಾಲ್ಮೂರು ಪ್ರದೇಶವನ್ನು ಪ್ರವೇಶಿಸಿ ಮುಂದೆ ಸಾಗುತ್ತದೆ. ಮೊಳಕಾಲ್ಮೂರು ತಾಲ್ಲೂಕಿನ ಮುಖ್ಯ ನದಿ 'ಜಿನಗಿಹಳ್ಳ' ಇದಕ್ಕೆ ಚಿನ್ನಹಗರಿ, ಚಿಕ್ಕಹಗರಿ, ಹನೆಯನದಿ, ಲಘುಹರಿ, ಪಾಪವಾಶಿನಿ ಎಂದೆಲ್ಲಾ ಹೆಸರುಗಳಿಂದ ಕರೆಯುತ್ತಾರೆ. ಈ ನದಿ ಚಿತ್ರದುರ್ಗಕ್ಕೆ ಸಮೀಪದ ಗೊಡಬನಾಳ್ ಗ್ರಾಮದ ಬಳಿಯಿಂದ ಹೊಳಲ್ಕೆರೆ ತಾಲ್ಲೂಕಿನ ಓಬಳದೇವರ ಗುಡ್ಡದಲ್ಲಿ ಹುಟ್ಟಿ ಚಿತ್ರದುರ್ಗ, ಜಗಳೂರು, ಮೊಳಕಾಲ್ಮೂರು ತಾಲ್ಲೂಕಿನ ಅನೇಕ ಕೆರೆಗಳಿಗೆ ನೀರು ಒದಗಿಸಿ, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ

ತಾಲ್ಲೂಕಿನ ಕಲ್ಲಹಳ್ಳಿ ಬಳಿ ಎಲ್ಲೆಯಾಗಿ ಹರಿದು ಆಂಧ್ರಪ್ರದೇಶದ ರಾಯದುರ್ಗದ ಬಳಿ ಹಗರಿ ನದಿಯನ್ನು ಕೂಡಿಕೊಳ್ಳುತ್ತದೆ. ಮತ್ತು ಮೊಳಕಾಲ್ಮೂರು ಬಳ್ಳಾರಿ ಜಿಲ್ಲೆಯ ತಾಲ್ಲೂಕಿನ ಮಧ್ಯ ಪ್ರವೇಶಿಸಿದಾಗ ಈಶಾನ್ಯ ಅಭಿಮುಖವಾಗಿ ಹರಿದು ವೇದಾವತಿಯನ್ನು ಸೇರುತ್ತದೆ. ಇದು ಹಾವಿನೋಪದಿಯಲ್ಲಿ ಹರಿಯುವುದನ್ನು ಕಾಣಬಹುದು. ಈ ನದಿಗೆ ಕೆಲವು ಸಣ್ಣ ಪುಟ್ಟ ಹಳ್ಳಿಗಳು ಬಂದು ಸೇರುತ್ತವೆ. ಈ ನದಿಗೆ ರಂಗಯ್ಯನ ದುರ್ಗ ಜಲಾಶಯ ಅಣೆಕಟ್ಟನ್ನು ನಿರ್ಮಿಸಿದ್ದಾರೆ. ಈ ಜಲಾಶಯದಿಂದ ಕೆಲವು ಕೆರೆಗಳಿಗೆ ನೀರು ಸರಬರಾಜಾಗಿ ನೀರಾವರಿ ವ್ಯವಸ್ಥೆಯಿಂದ ಕೆಲವೊಂದು ಹಳ್ಳಿಗಳಿಗೆ ಉಪಯುಕ್ತವಾಗಿದೆ. ರಾಂಪುರದ ಬಳಿ 'ಗುಂಡೇರಿಹಳ್ಳಿ' ಇದೆ. ಇದು ಮಳೆಗಾಲದ ಸಮಯದಲ್ಲಿ ಹರಿಯುತ್ತದೆ. ತಾಲ್ಲೂಕಿನಲ್ಲಿ ಚಿಕ್ಕ ದೊಡ್ಡ ಸುಮಾರು ೨೦ ಕೆರೆಗಳಿವೆ. ಇಲ್ಲಿನ ಭೂಮಿ, ಕಪ್ಪು ಮಿಶ್ರಿತ ಕೆಂಪು ಮಣ್ಣು, ಚೌಳು ಮಣ್ಣಿನಿಂದ ಕೂಡಿರುವುದನ್ನು ಕಾಣಬಹುದು.

ಈ ತಾಲ್ಲೂಕಿನ ಪೂರ್ವಶ್ರೇಣಿಯ ಕಣಶಿಲೆಯು ಬೆಟ್ಟ ಗುಡ್ಡಗಳಿಂದ ತುಂಬಿದ ಸಾಲಿನಿಂದ ಕಾಣುತ್ತದೆ. ಎಲ್ಲಾ ಬೆಟ್ಟಗಳು ನಗ್ನ ಶಿಲೆಮಯವಾಗಿವೆ ಎಂದು ಹೇಳಬಹುದು. ಬೆಟ್ಟಗುಡ್ಡಗಳು ನಿಸರ್ಗವು ನೀಡಿದ ಉಚಿತ ನೈಸರ್ಗಿಕ ಸಂಪನ್ಮೂಲಗಳಾಗಿವೆ. ಮೊಳಕಾಲ್ಮೂರು ಪರಿಸರದಲ್ಲಿ ಕಂಡುಬರುವ ಇಂತಹ ಬೆಟ್ಟಗುಡ್ಡಗಳು, ಗಿರಿಶಿಖರಗಳು ಸಹಜವಾಗಿಯೇ ಕೋಟೆ ಕೊತ್ತಲಗಳ ನಿರ್ಮಾಣಕ್ಕೆ ಸಹಕಾರಿಯಾಗಿವೆ.

**ಮೊಳಕಾಲ್ಮೂರು ಪರಿಸರದ ಬೆಟ್ಟಗಳು**

೧. ಶ್ರೀ ಜಟಂಗಿ ರಾಮೇಶ್ವರ ಬೆಟ್ಟ – ೩೪೬೯ ಅಡಿ ಎತ್ತರ

೨. ಶ್ರೀ ನುಂಕೇ ಭೈರವನ ಬೆಟ್ಟ – ೩೦೨೨ ಅಡಿ ಎತ್ತರ

೩. ಶ್ರೀ ಬ್ರಹ್ಮಗಿರಿಬೆಟ್ಟ (ಇಸಿಲ) – ೨೫೫೫ ಅಡಿ ಎತ್ತರ

೪. ಜೋಗಪ್ಪನ ಗುಡ್ಡ (ಕೂಗುಬಂಡೆ) ೨೫೪೦ ಅಡಿ ಎತ್ತರ

೫. ಸಂತೆಗುಡ್ಡ ೨೨೭೩ ಅಡಿ ಎತ್ತರ

ಈ ಬೆಟ್ಟಗಳನ್ನು ಇನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಈ ಪ್ರದೇಶದ ಬಗ್ಗೆ ಅಧ್ಯಯನ ಮಾಡಿದ ಆಂಗ್ಲ ಇತಿಹಾಸ ತಜ್ಞ ಬ್ರೂಸ್‌ಪೋಟ್ "ಈ ಬೆಟ್ಟ ಪ್ರದೇಶಗಳು ವಿಶಿಷ್ಟ ಸೌಂದರ್ಯದಿಂದ ಕೂಡಿವೆ"[೩] ಎಂದು ಹೇಳಿದ್ದಾರೆ. ಇಡೀ ತಾಲ್ಲೂಕು ಸಮುದ್ರ ಮಟ್ಟದಿಂದ ೨೦೬೮ ಅಡಿ ಎತ್ತರದಲ್ಲಿವೆ.

**೩.೨. ಮೊಳಕಾಲ್ಮೂರು ತಾಲ್ಲೂಕಿನ ಚಾರಿತ್ರಿಕ ಹಿನ್ನೆಲೆ**

ಮೊಳಕಾಲ್ಮೂರು ತಾಲ್ಲೂಕಿನ ಇತಿಹಾಸವು ಬಹಳ ಪ್ರಾಚೀನವಾದುದು. ಪೂರ್ವ ಶಿಲಾಯುಗದಿಂದಲೂ ಜನವಸತಿ ಇತ್ತೆಂಬುದಕ್ಕೆ ಈ ತಾಲ್ಲೂಕಿನ ಹಲವು ಭಾಗಗಳಲ್ಲಿ ದೊರೆತಿರುವ

ಬೃಹತ್ ಶಿಲಾ ಸಮಾಧಿಗಳು, ಇತರ ಪ್ರಾಚೀನ ಅವಶೇಷಗಳು ಹಾಗೂ ಬ್ರಹ್ಮಗಿರಿಯಲ್ಲಿ ನಡೆದಿರುವ ಉತ್ಖನನಗಳಿಂದ ಸ್ವಯಂವೇದ್ಯವಾಗಿದೆ.

ಇಲ್ಲಿನ ಇತಿಹಾಸವನ್ನು ಕ್ರಿ.ಪೂ. ೨ನೇ ಶತಮಾನದಿಂದಲೂ ಗುರುತಿಸಬಹುದು. ಈ ಪ್ರದೇಶವು ಮೌರ್ಯ ಸಾಮ್ರಾಜ್ಯಕ್ಕೆ ಸೇರಿತ್ತು ಎಂಬುದು ಬ್ರಹ್ಮಗಿರಿ, ಸಿದ್ಧಾಪುರ, ಜಟಂಗಿ ರಾಮೇಶ್ವರಗಳಲ್ಲಿ ದೊರೆತಿರುವ ಅಶೋಕನ ಶಾಸನಗಳಿಂದ ವ್ಯಕ್ತವಾಗುತ್ತದೆ. ಬ್ರಹ್ಮಗಿರಿಯ ಸುತ್ತಮುತ್ತ ವಿಸ್ತಾರವಾದ ಭೂಶೋಧನೆ ನಡೆದು ಈ ತಾಲ್ಲೂಕಿನ ಪ್ರಾಕ್ತನ ಸಂಸ್ಕೃತಿಯ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವಂತಾಗಿದೆ. ಬ್ರಹ್ಮಗಿರಿಯಲ್ಲಿ ನಡೆದ ಉತ್ಸವದಲ್ಲಿ ಕೆಲವು ಬಗೆಯ ಸಂಸ್ಕೃತಿಗಳು ಕಂಡುಬಂದಿವೆ. ಅತ್ಯಂತ ಪ್ರಾಚೀನವಾದ ನವಶಿಲಾಯುಗದ ಸಂಸ್ಕೃತಿ, ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿ, ದಪ್ಪ ಗುಂಡುಗಳನ್ನು ದಂಡೆಗೆ ಜೋಡಿಸಿ, ಕಲ್ಲಿನ ಶವಪೆಟ್ಟಿಗೆಯಲ್ಲೋ, ಆಳವಾದ ಕುಳಿಯಲ್ಲೋ, ಹಲವಾರು ಬಗೆಯ ಹೊಳಪಿನ ಮಡಕೆಗಳನ್ನು ಕಬ್ಬಿಣದ ಆಯುಧಗಳನ್ನಿಟ್ಟು ವಿಶಿಷ್ಟವಾಗಿ ನಡೆಸುತ್ತಿದ್ದ ಶವಸಂಸ್ಕಾರ ಪದ್ಧತಿ ಈ ಸಂಸ್ಕೃತಿಯ ಹೆಗ್ಗುರುತು. ಬ್ರಹ್ಮಗಿರಿಯಲ್ಲಿ ಇಂತಹ ಬೃಹತ್ ಶಿಲಾಸಮಾಧಿಗಳು ದೊರೆತಿವೆ. ಅಶೋಕ ಚಕ್ರವರ್ತಿಯು ತನ್ನ ಶಾಸನಗಳಲ್ಲಿ ಹೇಳಿಕೊಂಡಿರುವಂತೆ ಮಾನವ ಹಾಗೂ ಪ್ರಾಣಿಗಳ ಆರೋಗ್ಯ ರಕ್ಷಣೆಗೆ ತಕ್ಕ ವ್ಯವಸ್ಥೆ ಮಾಡಿದ್ದು, ಜೊತೆಗೆ ಅನೇಕ ಸನ್ಯಾಸಿ ಮಠಗಳು ಮತ್ತು ದೇವಾಲಯಗಳು ಒಂದು ಭವ್ಯವಾದ ಅರಮನೆಯನ್ನು ಸಹ ಕಟ್ಟಿಸಿದನೆಂದು ಪರಂಪರಾನುಗತವಾಗಿ ಬಂದ ದಾಖಲೆಗಳು ತಿಳಿಸುತ್ತವೆ. ಉದಾಹರಣೆಗೆ ಬ್ರಹ್ಮಗಿರಿ ಬೆಟ್ಟದಲ್ಲಿ ಒಂದು ಅರಮನೆಯನ್ನು ಕಾಣಬಹುದು. ಇದನ್ನು ಈಗ ಮಠ ಎಂದು ಕರೆಯುವುದು ವಾಡಿಕೆಯಾಗಿದೆ. ಈ ಮಠದ ಮುಂದೆ ತ್ರಿಶಂಕೇಶ್ವರನೆಂಬ ಹೆಸರಿನ ದೇವಾಲಯವಿದೆ. ಈ ದೇವಾಲಯದ ಶಾಸನದಿಂದ ಇದು ಪೂರ್ವದಲ್ಲಿ ಜೈನರ ರಾಜಧಾನಿಯಾಗಿತ್ತು ಎಂಬುವುದು ತಿಳಿಯುತ್ತದೆ. ಇದಾದ ನಂತರ ಇತಿಹಾಸ ಆರಂಭಕಾಲದ ನಾಗರೀಕತೆಯನ್ನು ಗುರುತಿಸಲಾಗಿದೆ. ಕ್ರಿ.ಪೂ. ೨ನೇ ಶತಮಾನದಲ್ಲಿ ಆರಂಭವಾದ ಈ ಸಂಸ್ಕೃತಿಯಲ್ಲಿ ಇಟ್ಟಿಗೆ ಕಟ್ಟಡಗಳನ್ನು ಕಟ್ಟಿರುವುದನ್ನು ಕಾಣಬಹುದು. ಬ್ರಹ್ಮಗಿರಿ ಬೆಟ್ಟದ ಇಳಿಜಾರಿನಲ್ಲಿ ಕಟ್ಟಿರುವ ಚೈತ್ಯಾಕಾರದ ಕಟ್ಟಡ ಇವುಗಳಲ್ಲಿ ಮುಖ್ಯವಾದದ್ದು. ಮೊಳಕಾಲ್ಮೂರು ತಾಲ್ಲೂಕಿನ ಸುತ್ತಮುತ್ತಲಿನ ಪ್ರದೇಶವು ಚಿಕ್ಕ ಚಿಕ್ಕ ಮೌರ್ಯರ ಮನೆಗಳನ್ನು ಕಾಣಬಹುದು. ನೀಲಗಿರಿಯ ಬಡಗರ ಮೌರ್ಯರ ಮನೆಗಳೆಂದು ಕರೆಯುತ್ತಾರೆ. ಇವುಗಳನ್ನು ಪೂರ್ವಕಾಲೀನರು ಇವುಗಳನ್ನು ಭೂಮ್ಯಂತರ್ಗತಗಳನ್ನಾಗಿ ಮಾಡುತ್ತಿದ್ದುದರ ಸ್ಮಾರಕಗಳೆಂದು ನಿಸ್ಸಂದೇಹವಾಗಿ ಹೇಳಬಹುದು. ಬ್ರಹ್ಮಗಿರಿ, ಸಿದ್ಧಾಪುರ, ಜಟಂಗಿ ರಾಮೇಶ್ವರಗಳಲ್ಲಿ ದೊರೆತಿರುವ ಶಾಸನಗಳನ್ನು ಆಳವಾಗಿ ದಪ್ಪವಾಗಿ ಬ್ರಾಹ್ಮಿ ಲಿಪಿ ಮತ್ತು ಪ್ರಾಕೃತ, ಖರೋಷ್ಠಿ ಮತ್ತು ಪಾಳಿ ಭಾಷೆಯಲ್ಲಿ ಕೆತ್ತಿಸಿದ್ದಾರೆ. ಈ ಶಾಸನಗಳು 'ಇಸಿಲಾ' ಪಟ್ಟಣದ ಬಗ್ಗೆ ಬೆಳಕನ್ನು ಚೆಲ್ಲುತ್ತವೆ."೪

ಮೊಳಕಾಲ್ಮೂರು ಬೆಟ್ಟದಲ್ಲಿ ಕದಂಬ ದೊರೆಗಳು ಕಟ್ಟಿಸಿದ ಕೋಟೆಯನ್ನು 'ಸುಂಕೆ ಕೋಟೆ' ಎಂದು ಹೆಸರಾಗಿದೆ. ಜಟಂಗಿ ರಾಮೇಶ್ವರ ಬೆಟ್ಟದ ಮೇಲೆ ಎತ್ತರದ ಬಂಡೆಯ ಕೆಳಗೆ ಇರುವ ತಣ್ಣೀರು ದೋಣಿಯ ಬಳಿ ಶ್ರೀರಾಮನು ಜಟಾಯುವಿಗೆ ಅಗ್ನಿ ಸಂಹಾರ ಮಾಡಿದನೆಂಬ ಹೇಳಿಕೆ ಉಂಟು. ಅನಂತರ ಕೆಲವು ದಿನ ಅಲ್ಲಿ ಏಕಾಂತವಾಗಿ ತಂಗಿದ್ದರಿಂದ ಅದಕ್ಕಾಗಿ ಆ ದೋಣಿ 'ಏಕಾಂತ ತೀರ್ಥ'ವೆಂದು ಹೆಸರಾಗಿದೆ ಎಂದು ಐತಿಹ್ಯವಿದೆ.

ಬುದ್ಧನಿಗೆ ಏಕಾಂತನೆಂದು ಹೆಸರಿದ್ದು, ಬೌದ್ಧರು ನೆಲೆಸಿದ ಸ್ಥಳವಾದ್ದರಿಂದ ಏಕಾಂತ ತೀರ್ಥ ಹೆಸರು ಬಂದಂತೆ ಕಾಣುತ್ತದೆ. ಈ ಬೆಟ್ಟದ ಮೇಲೆ 'ಸೀತಾದೋಣಿ' ಎಂಬ ನೀರಿನ ದೋಣಿ ಇದೆ. ಈ ಪ್ರದೇಶದಲ್ಲಿ ಅಕ್ಷರಗುಂಡು, ಎಮ್ಮೆ ತಮ್ಮನ ಗುಂಡು ಹಾಗೆ ಬಳೆಗಾರರ ಗುಂಡು ಎಂಬ ಮೂರು ಬಂಡೆಗಲ್ಲು ಶಾಸನಗಳು ಲಭ್ಯವಾಗಿವೆ. ಇವು ಬೌದ್ಧ ಧರ್ಮದ ಕುರುಹುವಿಗೆ ಸಾಕ್ಷಿಯಾಗಿವೆ. ಇಂತಹ ಚಾರಿತ್ರಿಕ ಪರಿಸರದಲ್ಲಿ ಈ ತಾಲ್ಲೂಕು ಪ್ರಸಿದ್ಧವಾಗಿದೆ. ಮೊಳಕಾಲ್ಮೂರು ಪ್ರದೇಶವನ್ನು ಶಾತವಾಹನರು ಆಳ್ವಿಕೆ ಮಾಡಿದರು. ಅಲ್ಲದೆ ಈ ಪ್ರದೇಶವು ರಾಷ್ಟ್ರಕೂಟರ ಆಳ್ವಿಕೆಗೆ ಸೇರಿತ್ತು. ೧೦ನೇ ಶತಮಾನದಲ್ಲಿ ನೊಳಂಬವಾಡಿ ೩೨೦೦೦ ಸೀಮೆಯಲ್ಲಿ ಸೇರ್ಪಡೆಗೊಂಡಿತ್ತು. ತದನಂತರ ಕಲ್ಯಾಣಿ ಚಾಲುಕ್ಯರ, ಹೊಯ್ಸಳರ ಹಂಗೂ ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಮುಂದೆ ಇದು ರಾಮದುರ್ಗದ ಪಾಳೆಯಗಾರರ ಆಡಳಿತಕ್ಕೆ ಸೇರಿತು. ಹಟ್ಟಿಯ ಪಾಳೆಗಾರರ ಮಲ್ಲಪ್ಪ ನಾಯಕನು ಈ ಪ್ರದೇಶವನ್ನು ರಾಯದುರ್ಗದ ಬೊಮ್ಮನಾಯಕನಿಗೆ ೨೦೦೦ ಕಪ್ಪು ಹಸುಗಳನ್ನು ೧೦೦೦ ಬಿಳಿ ಹಸುಗಳನ್ನು ಕೊಟ್ಟು ಪಡೆದುಕೊಂಡು ಇಲ್ಲಿ ಬೆಟ್ಟದ ಮೇಲ್ಕೈ ಕೋಟೆ ಹಾಗೂ ಸರೋವರಗಳನ್ನು ಕಟ್ಟಿಸಿದರು. ಮುಂದೆ ಇದು ಬಿಚ್ಚುಗತ್ತಿ ಭರಮಣ್ಣ ನಾಯಕನ ಕಾಲದಲ್ಲಿ (ಕ್ರಿ.ಶ. ೧೬೮೯-೧೭೨೧) ಚಿತ್ರದುರ್ಗದ ಪಾಳೆಗಾರರ ಆಳ್ವಿಕೆಯಲ್ಲಿ ಲೀನವಾಯಿತು. ಅನಂತರ ಹೈದರ್, ಟಿಪ್ಪು, ಬ್ರಿಟಿಷರ, ಮೈಸೂರು ಒಡೆಯರ ಆಳ್ವಿಕೆಗೆ ಒಳಗಾಗಿ ೧೮೮೬ರಲ್ಲಿ ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಗೆ ಮೊಳಕಾಲ್ಮೂರು ಪ್ರದೇಶವು ಸೇರಿತು.

### ೩.೩. ಸ್ವಾತಂತ್ರ್ಯ ಸಂಗ್ರಾಮ

ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಮೊಳಕಾಲ್ಮೂರು ತಾಲ್ಲೂಕು ತನ್ನ ಶಕ್ತಿ ಮೀರಿ ಪಾತ್ರವಹಿಸಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಗಳಾಗಿ ಜೈಲುವಾಸ ಅನುಭವಿಸಿದ ದೇಶಭಕ್ತರು ಕೆಲವರು ಇರುವುದು ತಾಲ್ಲೂಕಿನ ಹೆಮ್ಮೆಯ ಸಂಗತಿಯೇ ಸರಿ. ಸ್ವಾತಂತ್ರ್ಯ ಯೋಧರಲ್ಲಿ "ಬಿ.ಟಿ. ತಿಪ್ಪೇರುದ್ರಪ್ಪ, ಗುರ ನರಸಿಂಹಯ್ಯ ಹಾಗೂ ಅನ್ನದಾನಿ ವೀರಭದ್ರಪ್ಪ, ಎನ್.ಸಿ. ಅಯ್ಯಣ್ಣ. ಕೆರೆಕೊಂಡಾಪುರದ ಎಚ್.ಎಸ್. ಬಸವಣ್ಣನವರು ಪ್ರಮುಖರಾಗಿದ್ದಾರೆ."[೫]

### ೩.೪. ಮೊಳಕಾಲ್ಮೂರು ತಾಲ್ಲೂಕಿನ ದ್ವಿಭಾಷಿಕ ಪರಿಸರ

ಮನುಷ್ಯ ನಾಗರೀಕನಾಗುತ್ತಾ ಹೋದಂತೆ ಆತನ ಚಿಂತನೆಗಳು ಬೆಳೆದವು. ಆದ್ದರಿಂದ

ವಿಜ್ಞಾನ ಮತ್ತು ತಂತ್ರಜ್ಞಾನ ಬೆಳೆದು ಮನುಷ್ಯನ ಬದುಕಿನಲ್ಲಿ ಮಹತ್ತರ ಬದಲಾವಣೆಗಳಾದವು. ಮನುಷ್ಯ ಬೆಳವಣಿಗೆಯ ಹಂತಗಳು ಮನುಷ್ಯನನ್ನು ಸಂಘಜೀವಿಯಾಗಿ ಬದುಕುವಂತೆ ಮಾಡಿದವು. ಹೀಗೆ ಸಮಾಜದಲ್ಲಿ ಬದುಕುವ ಮನುಷ್ಯನಿಗೆ ಭಾಷೆಯೊಂದು ಸಂವಹನ ಮಾಧ್ಯವಾಗಿ ಮನುಷ್ಯನ ಯೋಚನೆ, ಚಿಂತನೆಗಳು ಎಲ್ಲವೂ ಭಾಷೆಯೊಂದರಿಂದ ಅಭಿವ್ಯಕ್ತಿಯಾಗಲು ಸಾಧ್ಯವಾಯಿತು. ಹೀಗೆ ಮನುಷ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಯುಗದಲ್ಲಿ ತನ್ನ ಮಾತೃಭಾಷೆಯೊಂದೇ ಕಲಿತು ಒಂದೇ ರೀತಿಯಾಗಿ ಬದುಕಲಾರ, ಬಾಳಲಾರ ತನ್ನ ಅವಶ್ಯಕತೆಗಳನ್ನು ಪೂರೈಸಲು ಅಲ್ಲಿನ ಪ್ರಾದೇಶಿಕ ಭಾಷೆಯನ್ನು ಕಲಿಯುವುದು ಅನಿವಾರ್ಯವಾಗುತ್ತದೆ. ಅಂತಹ ಸಂದರ್ಭದಲ್ಲಿ ದ್ವಿಭಾಷಿಕ ಸಮುದಾಯಗಳು ಕಾಣಿಸಿಕೊಳ್ಳುತ್ತವೆ. ವಲಸೆ ಬಂದಂತಹ ಸಮುದಾಯಗಳು ತಮ್ಮ ಮಾತೃಭಾಷೆಯೊಂದಿಗೆ ಅಲ್ಲಿನ ಪ್ರಾದೇಶಿಕ ಭಾಷೆಯನ್ನು ಅಥವಾ ಆ ಪ್ರದೇಶದಲ್ಲಿ ಬಳಸುವ ಭಾಷೆಗಳನ್ನು ಕಲಿತು ವ್ಯವಹರಿಸುವುದು ಅನಿವಾರ್ಯವಾಗುತ್ತದೆ. ಇಂತಹ ದ್ವಿಭಾಷಾ ಸಮುದಾಯಗಳಲ್ಲಿ ಯಾವ ರೀತಿ ಭಾಷೆ ಬಳಕೆಯಾಗುತ್ತದೆ ಮತ್ತು ಬದಲಾವಣೆಯ ಪ್ರಕ್ರಿಯೆಗಳೇನು? ಎಂಬ ಅಧ್ಯಯನವು ಕುತೂಹಲವನ್ನು ಮೂಡಿಸುತ್ತದೆ. ದ್ವಿಭಾಷಿಕ ಸಮುದಾಯಗಳಲ್ಲಿ ತಮ್ಮ ಮಾತೃಭಾಷೆಯನ್ನು ಕೌಟುಂಬಿಕ ವಲಯಗಳಲ್ಲಿ ಉಳಿಸಿಕೊಂಡು ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಕಾರಣಗಳಿಂದ ಪ್ರಾದೇಶಿಕ ಭಾಷೆಯನ್ನು ವ್ಯವಹಾರಿಕ ವಲಯಗಳಲ್ಲಿ ಬೆಳೆಸುವುದು ಕಂಡುಬರುತ್ತದೆ. ಇಂತಹ ಅಧ್ಯಯನಗಳನ್ನು ಸಾಮಾಜಿಕ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದರೆ ಉಪಯುಕ್ತವೆನಿಸುತ್ತದೆ. ಸಮಾಜ ಮತ್ತು ಭಾಷೆ ಇವೆರಡರ ಆಂತರಿಕ ಸಂಬಂಧ ವಿಶಿಷ್ಟವಾದದ್ದು. ಭಾಷೆಯಿಂದ ಸಮಾಜದ ರಚನಾ ವ್ಯವಸ್ಥೆಯನ್ನು ಬಹು ಸುಲಭವಾಗಿ ಅರಿಯಬಹುದು. ವ್ಯಕ್ತಿಯನ್ನು ಸಮಾಜದಿಂದ ಬೇರ್ಪಡಿಸಲಾಗದು. ಮತ್ತು ವ್ಯಕ್ತಿಯಿಂದ ಭಾಷೆಯನ್ನು ಬೇರ್ಪಡಿಸಲಾಗದು. ಭಾಷೆ ಸಮಾಜದ ಎಲ್ಲಾ ಚಟುವಟಿಕೆಯ ಕೇಂದ್ರ. ಸಮಾಜದ ಬೆಳವಣಿಗೆಗೆ ಹಾಗೂ ಬದಲಾವಣೆಗೆ ಭಾಷೆ ಅನಿವಾರ್ಯ. ಸಮಾಜದಲ್ಲಿ ಒಂದೊಂದು ಸಮುದಾಯಕ್ಕೆ ಭಾಷಾ ಭಿನ್ನತೆಯನ್ನು ಗುರುತಿಸಬಹುದು. ಮೊಳಕಾಲ್ಮೂರು ಪ್ರದೇಶದ ಪರಿಸರದಲ್ಲಿ ಕೆಲವರು ಕೌಟುಂಬಿಕ ವಲಯದಲ್ಲಿನ ಭಾಷೆ, ತೆಲುಗು ಮತ್ತು ವ್ಯವಹಾರಿಕ ವಲಯದ ಭಾಷೆ ಪ್ರಾದೇಶಿಕ ಭಾಷೆಯಿಂದ ಕನ್ನಡವಾಗಿದೆ. ಇವರ ಕೌಟುಂಬಿಕ ವಲಯದಲ್ಲಿ ತೆಲುಗು ಭಾಷೆ, ಶಿಷ್ಟ ತೆಲುಗಿಗಿಂತ ಭಿನ್ನವಾಗಿ ಕಂಡುಬರುತ್ತದೆ. ಈ ಭಾಷೆಯ ಮೇಲೆ ಪ್ರಾದೇಶಿಕ ಭಾಷೆಯಾದ ಕನ್ನಡ ಪ್ರಭಾವ ಬೀರಿ ಕನ್ನಡ ಮಿಶ್ರಿತ ತೆಲುಗು ಕುಟುಂಬದಲ್ಲಿನ ಆಪ್ತರು, ರಕ್ತಸಂಬಂಧಿಗಳು, ಬಂಧು ಬಳಗದವರು ಜೊತೆಗೆ ಬಳಸುವ ಭಾಷೆ ತೆಲುಗು ಆಗಿರುತ್ತದೆ.

ಒಂದು ಭಾಷಿಕ ಪ್ರದೇಶದಲ್ಲಿ ಹಲವಾರು ಕಾರಣಗಳಿಂದ ಬೇರೆ ಭಾಷೆಯ ಸ್ಥಳನಾಮಗಳು ಕಂಡುಬರಲು ಸಾಧ್ಯ. ದ್ವಿಭಾಷಿಕ ವಲಯದಲ್ಲಿ ಕೊಂಚ ಮಟ್ಟಿಗಾದರೂ ಪರಸ್ಪರ ಎರಡು ಭಾಷೆಗಳ ನಡುವೆ ನುಡಿಬೆರಕೆ, ನುಡಿಮಿಶ್ರಣ, ನುಡಿಜಿಗಿತಗಳು ಉಂಟಾಗಿರುವುದು ಸಹಜ

ಪ್ರಕ್ರಿಯೆಯಾಗಿದೆ. ಸ್ಥಳನಾಮಗಳನ್ನು ದ್ವಿಭಾಷಿಕ ವಲಯದಲ್ಲಿ ನೋಡುವಾಗ ಅಲ್ಲಿ ನಡೆಯುವ ದ್ವಿಭಾಷಿಕ ವಲಯದ ನುಡಿಬೆರಕೆ, ನುಡಿಜಿಗತವನ್ನು ಗುರುತಿಸುವುದು ಸೂಕ್ತವೆನಿಸುತ್ತದೆ. ಕಾರಣ ನುಡಿಬೆರಕೆ, ನುಡಿಜಿಗಿತವನ್ನು ಇಲ್ಲಿ ಪೂರ್ವ ಪ್ರವೇಶಿಕವಾಗಿ ನೀಡಲಾಗಿದೆ.

ಇಂಗ್ಲೀಷ್‌ನ code mixingಗೆ ಸಂವಾದಿಯಾಗಿ ನುಡಿಬೆರಕೆ, ನುಡಿಮಿಶ್ರಣ, ಭಾಷಾ ಮಿಶ್ರಣ ಎಂದೂ, code swichingಗೆ ಸಂವಾದಿಯಾಗಿ ನುಡಿಜಿಗತ, ನುಡಿಪಲ್ಲಟ ಎಂಬ ಪದಗಳನ್ನು ಕನ್ನಡದ ಸಂದರ್ಭದಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ಬರಹಗಳಲ್ಲಿ ಬಳಸಲಾಗುತ್ತಿದೆ. ದ್ವಿಭಾಷಿಕ ಸನನ್ವೇಶಗಳಲ್ಲಿ ಉಂಟಾಗುವ ಈ ಭಾಷಾ ಪ್ರಕ್ರಿಯೆಗಳ ಹಿಂದೆ ಭಾಷಾ ಆಯ್ಕೆಯು ಪ್ರಧಾನವಾಗಿದ್ದು, ದ್ವಿಭಾಷಿಕರು ಯಾವ ಸಂದರ್ಭದಲ್ಲಿ ಎಷ್ಟು ಹೇಗೆ ಭಾಷೆಯನ್ನು ಬಳಸುತ್ತಾರೆ. ಭಾಷೆಯನ್ನು ಬಳಸುವುದರ ಮೂಲಕ ತನ್ನ ಸ್ಥಾನವನ್ನು ಹೇಗೆ ಗುರುತಿಸಿಕೊಳ್ಳಬಹುದು ಎನ್ನುವುದು ಸಹ ಮುಖ್ಯವಾಗಿರುತ್ತದೆ. ಒಬ್ಬ ಭಾಷಿಕನ ಭಾಷಾ ಆಯ್ಕೆ ಸಾಮಾಜಿಕ ಪಾತ್ರವನ್ನು ಆಯ್ಕೆ ಮಾಡಿಕೊಳ್ಳುವಾಗ ಭಾಷೆಯು ಅದೇ ಪ್ರಮಾಣದಲ್ಲಿ ಆಯ್ಕೆಯಾಗುತ್ತಿರುತ್ತದೆ. ಈ ಭಾಷಾ ಆಯ್ಕೆಯು ವ್ಯಕ್ತಿಯ ಜಾತಿ, ವಯಸ್ಸು, ಲಿಂಗ, ಶಿಕ್ಷಣ ಸಾಮಾಜಿಕ ಸ್ಥಾನಮಾನಗಳು, ಅವರು ವಾಸಿಸುವ ಸ್ಥಳ ಮುಂತಾದ ಅಂಶಗಳನ್ನು ಅವಲಂಬಿಸಿರುತ್ತದೆ. ಕನ್ನಡದ ಎಲ್ಲೆ ಮತ್ತು ತೆಲುಗಿನ ಎಲ್ಲೆ ರಾಜಕೀಯ ಗಡಿಯನ್ನು ಮೀರಿ ನಿಂತ ಪ್ರದೇಶಗಳಲ್ಲಿ ಬಹುಮಟ್ಟಿಗೆ ನುಡಿಮಿಶ್ರಣದ ಸಂದರ್ಭಗಳು ಕಂಡುಬರುವುದು ಕಾಣುತ್ತೇವೆ. ದಿನನಿತ್ಯದ ವ್ಯವಹಾರಗಳಲ್ಲಿ ನುಡಿಬೆರಕೆ, ನುಡಿಮಿಶ್ರಣ, ನುಡಿಜಿಗಿತಗಳು ಕಂಡುಬರುತ್ತವೆ. ವ್ಯವಹಾರದ ಸಂದರ್ಭದಲ್ಲಿ ತೆಲುಗು ಮಾತೃ ಭಾಷಿಕರು ಕನ್ನಡಿಗರೊಂದಿಗೆ ಕನ್ನಡ ಮಾತೃ ಭಾಷಿಕರು ತೆಲುಗರೊಂದಿಗೆ ಸಂವಹನ ಏರ್ಪಡಿಸಿಕೊಂಡಾಗ ಸಹಜವಾಗಿಯೇ ನುಡಿಜಿಗಿತ, ನುಡಿಬೆರಕೆಗಳು ಉಂಟಾಗುತ್ತವೆ. ಭಾಷಿಕರು ತಮಗೆ ತಿಳಿದ ಭಾಷೆಯಿಂದ ತಿಳಿಯದ ಭಾಷೆಯ ಕೆಲವು ಕೊರತೆಗಳಿಂದ ಅರಕೊರೆಯಾಗಿ ತಿಳಿಯದ ಭಾಷೆಗೆ ತುಂಬುವುದು ಮೊಳಕಾಲ್ಮೂರು ಪರಿಸರದ ಗಡಿಭಾಗದ ಸ್ಥಳಗಳಲ್ಲಿ ಕಂಡುಬರುತ್ತದೆ. ಅಂತಹ ಮಾದರಿಗಳು ಇಲ್ಲವೆ.

ದಿನಾಲಿ ಬಸ್ ಎಕ್ಕಿಕೊಂಡೇ ನಮ್ಮೂರಿಗೆ ಹೋಗದು

ಅವನಿಗೇನು ವಂಕಾಯಿಗೊತ್ತು

ಅವೆಲ್ಲ ಒಂದೀಟು ಕೆಲಸ ಮಾಡಕಿಲ್ಲ.

ರಾಂಡಿ ಸಾರ್ ಇದಿ ರಾಜ್ಯಲಕ್ಷ್ಮಿ ಲಾಟರಿ

ಎಂಬಲ್ಲಿ ದಿನನಿತ್ಯದ ವ್ಯವಹಾರ, ವ್ಯಾಪಾರ ಮುಂತಾದ ಕಡೆ ಸಾಮಾನ್ಯವಾಗಿ ಭಾಷೆಯು ಬೆರೆತು ಇನ್ನೊಂದು ಭಾಷೆಯೊಂದಿಗೆ ಜಿಗಿಯುವ ಸಂದರ್ಭಗಳಿರುತ್ತವೆ. ಎರಡು ಭಾಷೆಗಳು ತಮ್ಮ ತೆರುಪುಗಳನ್ನು ತುಂಬಿಕೊಳ್ಳಲು, ಕೂಡುಕೊಳ್ಳುವಿಕೆಯ ಪ್ರಕ್ರಿಯೆಯನ್ನು ಕಾಣಬಹುದು. ಈ ಮೇಲಿನ ಹಿನ್ನೆಲೆಯೊಂದಿಗೆ ದ್ವಿಭಾಷಿಕ ವಲಯದಲ್ಲಂತಹ ನುಡಿಬೆರಕೆ ಮತ್ತು ನುಡಿಜಿಗಿತಗಳನ್ನು

ಸ್ವಲ್ಪ ಮಟ್ಟಿಗಾದರೂ ಬೇರೆ ಬೇರೆ ರೂಪಗಳಲ್ಲಿ ಸ್ಥಳನಾಮಗಳಲ್ಲಿ ಗುರುತಿಸಲು ಸಾಧ್ಯವಿದೆ. ಮೊಳಕಾಲ್ಮೂರು ತಾಲ್ಲೂಕಿನ ಕೆಲವು ಹಳ್ಳಿಗಳ ಭಾಗಶಃ ತೆಲುಗಿನ ಪ್ರಭಾವಕ್ಕೊಳಪಟ್ಟಿವೆ. ಈ ಕಾರಣದಿಂದಾಗಿ ಪರಸ್ಪರ ದ್ವಿಭಾಷಿಕ ವಲಯ ಪ್ರೇರಣೆ ಪ್ರಭಾವದಿಂದ ಸ್ಥಳನಾಮಗಳ ಮೇಲೆ ಸಾಕಷ್ಟು ಪ್ರಭಾವ ಬೀರಿದೆಂಬುದನ್ನು ಗುರುತಿಸುವ ಪ್ರಯತ್ನವಿದೆ. ತೆಲುಗು ಭಾಷೆಯನ್ನು ಕರ್ನಾಟಕದ ಗಡಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಬಳಸುವವರು ಇದ್ದಾರೆ. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಹೆಚ್ಚಾಗಿ ತೆಲುಗು ಭಾಷೆಯನ್ನು ಬಳಸುವ ಜನಾಂಗವನ್ನು ಗುರುತಿಸಬಹುದು. ಭಾರತದಲ್ಲಿ ಹಿಂದಿ ಭಾಷೆಯ ನಂತರ ಬಹುಸಂಖ್ಯಾರಿಂದ ಬಳಕೆಯಾಗುತ್ತಿರುವ ಭಾಷೆ ಎಂದರೆ ತೆಲುಗು ಚಾರಿತ್ರಿಕವಾಗಿ ಅಧ್ಯಯನ ಮಾಡಿದಾಗ ತೆಲುಗು ಮತ್ತು ಕನ್ನಡ ಭಾಷೆಗಳು ರಚನೆಯಲ್ಲಿ ಸಮಾನತೆಗಳು ಹೆಚ್ಚು. ಮೊಳಕಾಲ್ಮೂರು ತಾಲ್ಲೂಕು ಪ್ರದೇಶದಲ್ಲಿ ನೆಲೆಸಿರುವ ಎಲ್ಲಾ ಜನಾಂಗಗಳಿಗೆ ತೆಲುಗು ಭಾಷೆಯ ಪರಿಚಯವಿದ್ದರೂ ವಿಶೇಷವಾಗಿ ತೆಲುಗು ಭಾಷೆ ಬುಡಕಟ್ಟು ಸಮುದಾಯದ ಮ್ಯಾಸನಾಯಕರಲ್ಲಿ ಹೆಚ್ಚಾಗಿ ಬಳಕೆಯಾಗುತ್ತದೆ. ಇವರು ಕೌಟುಂಬಿಕ ವಲಯದಲ್ಲಿ ತೆಲುಗು ಭಾಷೆಯನ್ನು ಬಳಸುತ್ತಾರೆ. ವ್ಯವಹಾರಿಕ ವಲಯದಲ್ಲಿ ಕನ್ನಡ ಭಾಷೆಯನ್ನು ಬಳಸುತ್ತಾರೆ. ವ್ಯವಹಾರಿಕ ವಲಯಗಳಾದ ಸಾರ್ವಜನಿಕ ಸ್ಥಳಗಳಲ್ಲಿ ಅಫೀಸು, ಶಾಲಾ ಕಾಲೇಜುಗಳು, ಮಾರುಕಟ್ಟೆಗಳಲ್ಲಿ, ಸಿನಿಮಾ ಮಂದಿರ, ಆಟದ ಮೈದಾನ, ಹೋಟೆಲ್ ಮುಂತಾದವುಗಳಲ್ಲಿ ಪ್ರಾದೇಶಿಕ ಭಾಷೆ ಕನ್ನಡವಾಗಿರುವುದು. ಕನ್ನಡ ಭಾಷೆಯನ್ನು ಬಳಸುತ್ತಾರೆ. ದ್ವಿಭಾಷಿಕರು ಕನ್ನಡ ಮತ್ತು ತೆಲುಗು ಮಾತನಾಡುವರು.

"ವಿಜಯನಗರ ಪ್ರಾರಂಭ ಕಾಲದ ರಾಜರುಗಳ ಆಳ್ವಿಕೆಯ ಕಾಲದಲ್ಲಿ ತೆಲುಗು ಮಾತನಾಡುವ ಪ್ರದೇಶವು ಕನ್ನಡ ಮಾತನಾಡುವ ಪ್ರದೇಶಗಳು ನಿಕಟ ಸಂಪರ್ಕ ಹೊಂದಿದ್ದವು. ಅದರ ರಾಜಧಾನಿಯು ದ್ವಿಭಾಷಾ ಪ್ರದೇಶದಲ್ಲಿ ನೆಲೆಗೊಂಡಿತ್ತು. ವಿಜಯನಗರ ಸಾಮ್ರಾಜ್ಯದಲ್ಲಿ ಅರ್ಧದಷ್ಟು ಭಾಗವು ತೆಲುಗು ಮಾತನಾಡುವ ಪ್ರದೇಶಗಳಿಂದ ಕೂಡಿತ್ತಾದರೂ ವಿಜಯನಗರದ ಮೊದಲನೆಯ ರಾಜವಂಶವು ಕನ್ನಡ ವಿದ್ವಾಂಸರಿಗೆ ಆಶ್ರಯ ನೀಡಿತ್ತೆಂದು ಕೆ. ಈಶ್ವರದತ್ತ ಅವರು ತಮ್ಮ ವಿಜಯನಗರ ಸಾಮ್ರಾಜ್ಯ ಕಾಲದ ತೆಲುಗು ಸಾಹಿತ್ಯ, ಸ. ದೀಕ್ಷಿತ್ ಎಂಬ ಲೇಖನದಲ್ಲಿ ಹೇಳಿದ್ದಾರೆ. ವಿಜಯನಗರ ಕಾಲದಿಂದಲೇ ಈ ಪ್ರದೇಶದ ಮೇಲೆ ತೆಲುಗಿನ ಪ್ರಭಾವ ಬೀರಿದೆ ಎಂದು ಹೇಳಲಾಗುವುದು.

### ೩.೫. ಕವಿ ಕಾಳಿದಾಸನನ್ನು ಸ್ತುತಿಸಿದ ಶ್ಲೋಕ

ಮೊಳಕಾಲ್ಮೂರು ಬೆಟ್ಟದ ಮೇಲಿನ ಕೆರೆಯ ಬಳಿಯಿರುವ ಬಂಡೆಯಲ್ಲಿನ ಶಾಸನವು "ಶ್ರೀಮದ್ಧ ಮಹಾನಾಯಕಚಾರ್ಯ ಹಟ್ಟಿ (ನಾಯಕನಹಟ್ಟಿ) ಕಸ್ತೂರಿ ಮಲ್ಲಪ್ಪನಾಯಕನು ತನ್ನ ತಾಯಿಯಾದ ಲಕ್ಷ್ಮವ್ವ ನಾಗತಿಯ ಹೆಸರಿನಲ್ಲಿ ಕ್ರಿ.ಶ. ೧೬೭೦ರಲ್ಲಿ ಕೆರೆಯನ್ನು ನಿರ್ಮಿಸಿದ ವಿಚಾರವನ್ನು ಪ್ರಸ್ತಾಪಿಸುತ್ತದೆ."[೬] ಈಗಲೂ ಬೆಟ್ಟದ ಮೇಲೆ ಕೆರೆಯಿದೆ. ಕೆರೆಯ ಮಧ್ಯೆ ಇರುವ ಹುಟ್ಟು ಗುಂಪಿನ ಮೇಲೆ ಒಂದು ಆನೆಯ ಚಿತ್ರವಿದೆ. ಆನೆಯ ಕಾಲಿನ ಮೇಲೆ ಕಾಳಿದಾಸನ

ಒಂದು ಶ್ಲೋಕವನ್ನು ಸಂಸ್ಕೃತ ಹಾಗೂ ಕನ್ನಡದಲ್ಲಿ ಬರೆಯಲಾಗಿದೆ. ಶ್ಲೋಕದ ವಿಶೇಷವೇನೆಂದರೆ ಮೊದಲನೆಯ ಅಕ್ಷರದಿಂದ ಓದಿದರೆ ಏನು ಅರ್ಥ ಬರುತ್ತದ್ದೋ, ಅದೇ ಅರ್ಥ ಕೊನೆಯ ಅಕ್ಷರದಿಂದ ಓದಿದರೂ ಬರುತ್ತದೆ.

**ಶ್ಲೋಕ**

ಕಂಜರಂ ಪುರತೇಂದ್ರಚಂ ಮಹೇಂದಾಳಿ ಸದಾಳಿಕಾ

ಕಾಳಿದಾಸಳಿದಾಂ ಹೇಮಚಂದ್ರಂ ತೇರ ಪುರಂಜಕಂ

ಶ್ಲೋಕದ ಅರ್ಥ ಹೀಗಿದೆ "ಹೇ ಆನಂದದಾತನಾದ ಕಾಳಿದಾಸನೇ, ಮನಸಂತೋಷವನ್ನು ಉಂಟುಮಾಡುವ ನಿನ್ನ ಶ್ಲೋಕವು, ಸುಖವನ್ನು, ಜಯವನ್ನು ಮತ್ತು ಐಶ್ವರ್ಯವನ್ನು ಕೊಡುತ್ತದೆ. ಅಲ್ಲದೆ ಶತೃಗಳಿಗೂ ಕೂಡ ಸಂತೋಷವನ್ನೀಯುತ್ತದೆ. ಈ ಪುರದಲ್ಲಿ ನಿನ್ನ ಮಮತೆಯ ತೋರಲ್ಪಡುತ್ತದೆ. ನೀನು ಕವಿ ಹೃದಯದಲ್ಲಿ ಅನಿಮಿತವಾಗಿ ಗೌರವಿಸಲ್ಪಟ್ಟವನು"[೭] ಎನ್ನುವ ಅರ್ಥದಿಂದ ಕೂಡಿದ ಈ ಶ್ಲೋಕವನ್ನು ಗಮನಿಸಿದಾಗ ಹುಲ್ಲೂರು ಶ್ರೀನಿವಾಸ ಜೋಯಿಸರು ಕಾಳಿದಾಸನು ಜಟಂಗಿ ರಾಮೇಶ್ವರ ಬೆಟ್ಟಕ್ಕೆ ಭೇಟಿ ನೀಡಿ ಒಂದು ವರ್ಷ ಕಾಲ ವಾಸವಾಗಿದ್ದನೆಂದು ಅಭಿಪ್ರಾಯಪಡುತ್ತಾರೆ. ಈ ಕಾಳಿದಾಸನು ತನ್ನ ಮೇಘದೂತ ಕಾವ್ಯದಲ್ಲಿ ಜಟಂಗಿ ರಾಮೇಶ್ವರ ಬೆಟ್ಟವನ್ನು "ಜನಕತನಯಾಸ್ನಾವ ಪುಣ್ಯೋದಕೇಪು: ಸಿಗ್ದಚಾಯತರಾಘುರಮಗಿ ಯರ್ಾಶ್ರಮೇಘ"[೮] ಎಂದು ವರ್ಣಿಸಿದ್ದಾರೆ.

## ೩.೬. ಮೊಳಕಾಲ್ಮೂರು ತಾಲ್ಲೂಕಿನ ಸಾಂಸ್ಕೃತಿಕ ವೀರರು

ಮಾನವನ ಇತಿಹಾಸವನ್ನೊಮ್ಮೆ ಅವಲೋಕಿಸದರೆ, ಅವನ ಏಳುಬೀಳಿನ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕಾಣುತ್ತೇವೆ. ಮನುಷ್ಯನೇ ದೈವ ಸ್ವರೂಪವಾಗಿ ದೈವವೇ ಮನುಷ್ಯರೂಪವಾದ ಪರಿವರ್ತನೆಯಿಂದ ಪರಂಪರೆಯುದ್ದಕ್ಕೂ ಕೊಡುಕೊಳ್ಳುವಿಕೆಗಳನ್ನು ಗುರುತಿಸಬಹುದು. ಇಂತಹ ಸಾಧ್ಯತೆಗಳಿಂದಾಗಿಯೇ ಜನಪದರ ಸ್ಮೃತಿ ಪಟಲದಲ್ಲಿ ಸಾಂಸ್ಕೃತಿಕ ವೀರರನ್ನು ಕಾಣಬಹುದಾಗಿದೆ. ಸಾಂಸ್ಕೃತಿಕ ಸಂಘರ್ಷದ ಚಿತ್ರಣವನ್ನು ನೋಡಬಹುದಾಗಿದೆ.

ಯಾವುದೋ ಒಂದು ಕಾಲಘಟ್ಟದಲ್ಲಿ ಜನರನ್ನು ಹಿಂಸಿಸುತ್ತಿರುವ ರಾಕ್ಷಸರನ್ನು ಸಂಹಾರ ಮಾಡಿಯೋ, ದೈತ್ಯ ಪ್ರಾಣಿಗಳನ್ನು ಕೊಲ್ಲುವ ಮೂಲಕ ಜನರ ಹಿತವನ್ನು ಕಾಪಾಡಿಯೋ, ಆ ಜನರ ಪಾಲಿಗೆ ಭೂಮಿಯ ಮೇಲಿನ ಸಾಕ್ಷಾತ್ ದೈವವಾಗಿ ಬಿಡುತ್ತಾನೆ. ಅವನು ಮಾನವನಾಗಿದ್ದರೂ ಅತಿಮಾನುಷವಾಗಿ ಆ ಕ್ಷಣಕ್ಕೆ ಗೋಚರಿಸುತ್ತಾನೆ. ಆ ಅತಿಮಾನುಷತೆಯೇ ಜನರಲ್ಲಿ ಭಯ-ಭಕ್ತಿ ಸಮರ್ಪಣ ಭಾವವನ್ನು ಒಡಮೂಡಿಸುವ ಜೊತೆಗೆ ಅವನ ಮನದೊಳಗೆ ಮೆಲುಕು ಹಾಕುವ ಆಹಾರವಾಗಿ ಕಾವ್ಯ, ಕಥೆ, ಐತಿಹ್ಯ, ಪುರಾಣವಾಗಿ ಅವುಗಳ ನಾಯಕನಾಗುತ್ತಾನೆ. ಇಂತಹ ಸಾಂಸ್ಕೃತಿಕ ನಾಯಕರು (ವೀರರು) ನಮ್ಮ ಜನಪದರ ನೆನಪಿನ ಆಳದಲ್ಲಿ ಅಚ್ಚಳಿಯದೇ ಉಳಿದಿದ್ದಾರೆ. ಅಂತಹ ನಾಯಕರ ಬಗೆಗೆ ಅಧ್ಯಯನ ಮಾಡುವುದು

ಇಂದು ಎಂದಿಗಿಂತಲೂ ಅತ್ಯಾವಶ್ಯಕವಾಗಿದೆ. ಮೊಳಕಾಲ್ಮೂರು ಪರಿಸರದಲ್ಲಿ ಜನರ ಬಾಯಲ್ಲಿ ಮನದಲ್ಲಿ ನಿತ್ಯ ಜಪವಾಗಿರುವ 'ನುಂಕೆಮಲೆ ಸಿದ್ದೇಶ್ವರನೂ ಅಂತಹ ಒಬ್ಬ ಶಕ್ತಿಶಾಲಿ ಸಾಂಸ್ಕೃತಿಕ ವೀರನಂತಹ ನಾಯಕ ಜನಮನದಲ್ಲಿ ದಾಖಲಾದದ್ದನ್ನು ಹೊರತುಪಡಿಸಿದರೆ, ಲಿಖಿತವಾಗಿ ದಾಖಲಾದದ್ದು ವಿರಳ. ಭೈರವಾರಾಧನೆ ಕೇವಲ ಕರ್ನಾಟಕದಲ್ಲಿ ಮಾತ್ರ ಕಂಡುಬರುವುದಿಲ್ಲ. ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡುಗಳಲ್ಲಿಯೂ ಬಹುತೇಕ ಭಾರತಾದ್ಯಂತ ಭೈರವಾರಾಧನೆಯ ಕುರುಹುಗಳನ್ನು ನೋಡಬಹುದಾಗಿದೆ. "ಊರಿಗೊಂದು ಬೋರೆದೇವರ ಗುಡಿ" ಎಂಬ ಗಾದೆಯನ್ನು ನೋಡಿದರೆ, ಕರ್ನಾಟಕದಲ್ಲಿ ಭೈರವ ದೇವಸ್ಥಾನದ ಬಾಹುಳ್ಯವನ್ನು ಗಮನಿಸಬಹುದು. ನುಂಕೇಮಲೆ ಸಿದ್ದೇಶ್ವರನ ಮೌಖಿಕ ಚರಿತ್ರೆಯನ್ನು ಅವಲೋಕಿಸಿದರೆ ಆತನೊಬ್ಬ ಸಾಂಸ್ಕೃತಿಕ ವೀರನಾಗಿ ಸಾಮಾನ್ಯ ಜನರ ನೋವು–ನಲಿವಿಗೆ ಸ್ಪಂದಿಸಿದ ವ್ಯಕ್ತಿಯಾಗಿ ಮೊಳಕಾಲ್ಮೂರು ಪರಿಸರದ ಸಾಂಸ್ಕೃತಿಕ ನಾಯಕನಾಗಿ ಕಂಡುಬರುತ್ತಾನೆ. ಏಕೆಂದರೆ ರಾಕ್ಷಸರ ಹಾವಳಿಯಿಂದ ಸಾಮಾನ್ಯ ಜನರು ತತ್ತರಿಸಿ ಹೋಗುತ್ತಿದ್ದಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಜನಸಾಮಾನ್ಯರ ಉಳುವಿಗಾಗಿ ಕೈಲಾಸದಿಂದ ಕಾಲಭೈರವ ಭೂಲೋಕಕ್ಕೆ ಬಂದನು. ದೈತ್ಯ ರಾಕ್ಷಸರಾದ ರಸಾಸಿದ್ಧ ಮತ್ತು ಆಂಗ್ಲರನ್ನು ಸಂಹಾರ ಮಾಡಿ, ಜನಸಾಮಾನ್ಯರ ಕಷ್ಟವನ್ನು ಪಾರುಮಾಡಿದ. ಮೌಖಿಕ ಚರಿತ್ರೆಯಲ್ಲಿ ಈತನನ್ನು ಗೋವುಗಳನ್ನು ರಕ್ಷಿಸಿದ ಗೋರಕ್ಷಕನಾಥನೆಂತಲೂ ಕರೆಯುತ್ತಾರೆ. ಹಲವು ಜಾತಿ, ಜನಾಂಗವನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಇಂದಿಗೂ ನುಂಕೇಮಲೆ ಬೆಟ್ಟ ಸಾಮರಸ್ಯದ ಸಂಕೇತವಾಗಿದೆ. ದೇಶದಲ್ಲಿ ಕೋಮುದಳ್ಳುರಿಗಳು ನಡೆಯುತ್ತಿರುವ ಈ ಹೊತ್ತಿನಲ್ಲಿ ಇಂತಹ ಸಾಮರಸ್ಯದ ಸಾಂಸ್ಕೃತಿಕ ನಾಯಕರನ್ನು ಸ್ಮರಿಸುವುದು ಅವಶ್ಯಕವಾಗಿದೆ.

ನುಂಕೇಮಲೆ ಬೆಟ್ಟದಲ್ಲಿ ಈಗಲೂ ನಾಥಪಂಥದ ಸ್ವಾಮೀಜಿಯೇ ನೇಮಕಗೊಳ್ಳುತ್ತಾರೆ. ಇದಕ್ಕೆ ಕಾರಣ ನಾಥಪಂಥದ ಕೇಂದ್ರವಾದ ಮಂಗಳೂರಿನ ಕದ್ರಿಯಲ್ಲಿ ನಾಥಪಂಥದ ದೇವಸ್ಥಾನಗಳ ಪಟ್ಟಿಯಲ್ಲಿ ನುಂಕೇಮಲೆ ಬೆಟ್ಟವೂ ಸೇರಿದೆ"' ಈ ಕಾರಣದಿಂದ ಈ ಕ್ಷೇತ್ರ ನಾಥಪಂಥದ ಆರಾಧನಾ ಕೇಂದ್ರವೂ ಆಗಿದೆ.

ಮೊಳಕಾಲ್ಮೂರು ತಾಲ್ಲೂಕಿನ 'ಕಪ್ಪಡಬಂಡೆ ಹಟ್ಟಿ'ಯಲ್ಲಿರುವ ಪೆದ್ದಯ್ಯನ ವೀರಗಲ್ಲು ೨೦ನೇ ಶತಮಾನದಲ್ಲಿ ಕೆತ್ತಿರುವುದಾಗಿದೆ. ಗೊಲ್ಲರಲ್ಲಿಯೂ ಚಿತ್ತಯ್ಯ, ಸಿರಿಯಣ್ಣ ಸಾಂಸ್ಕೃತಿಕ ವೀರರಾಗಿ ಕಂಡುಬರುತ್ತಾರೆ. ಪಶುಪಾಲಕರಾಗಿ ತಮ್ಮ ದನಗಳನ್ನು ಹುಲಿ, ಚಿರತೆ, ಸಿಂಹ, ಕಿರುಬಗಳಂಥ ಕಾಡು ಪ್ರಾಣಿಗಳಿಂದ ರಕ್ಷಿಸಲು ಪ್ರಾಣವನ್ನು ಮುಡುಪಾಗಿಟ್ಟು ಹೋರಾಡಿದೆ. ಯರಮಂಚಯ್ಯನ ಮಗ ಪೆದ್ದಯ್ಯನ ಸಾಧನೆ ಅವಿಸ್ಮರಣೀಯ. ಕಪ್ಪಡ ಬಂಡೆಹಟ್ಟಿ, ಮೊಳಕಾಲ್ಮೂರು ತಾಲ್ಲೂಕಿನಲ್ಲಿರುವ ಸಾಮಾನ್ಯ 'ಸಮಾಧಿ ಕ್ಷೇತ್ರ' ನೇರ್ಲಹಳ್ಳಿ ಕೋನ ಸಾಗರದ ಮಧ್ಯೆ ಇರುವ ಕಪ್ಪಡ ಬಂಡೆಹಟ್ಟಿಯಲ್ಲಿ ಇಪ್ಪತ್ತನೆಯ ಶತಮಾನದ ಯರಮಂಚಯ್ಯನ ಮಗ 'ಪೆದ್ದಯ್ಯ'ನೆಂಬ ವೀರನ ವೀರಗಲ್ಲಿದೆ. ಇದರ ವಿವರವೆಂದರೆ "ಚಿರತೆಯೊಡನೆ ಹೋರಾಡಿ ಸಮಾಧಿಯಾದ

ಪೆದ್ದಯ್ಯನ ಸ್ಮಾರಕ ಇಂದು ಆರಾಧನಾ ದೇವತೆಯಾಗಿದೆ. ಪೂರ್ವಜರ ಪ್ರತೀಕವೆಂಬಂತೆ 'ಕರುನಾಡು' ಬೆಡಗಿಯರು ಇದಕ್ಕೆ ಹಬ್ಬ, ಆಚರಣೆಗಳನ್ನು ಮಾಡುತ್ತಿರುವರು. ನಾಲ್ಕು ಬಂಡೆಗಳ ನಡುವೆ ವೀರಗಲ್ಲಿದ್ದು ಕಾಯಿ, ಹಣ್ಣು, ಎಡೆಯನ್ನು, ನೈವೇದ್ಯ ಮಾಡಲಾಗುತ್ತದೆ. ಮ್ಯಾಸನಾಯಕರ ಮಂದ್ಲಾರು ಗೋತ್ರದ 'ಕರಿನಾರು' ಬೆಡಗಿಯರು ಪೂಜಿಸುತ್ತಿರುವ ಚಿರತೆಯನ್ನು ಕೊಂದದ್ದು. ಕೋನಸಾಗರ ಗುಡ್ಡದಲ್ಲಿ ಈ ಘಟನೆ ಜರುಗಿದೆ."[೧೦] ಈ ಪ್ರದೇಶ ಅಷ್ಟೇ ಮಹತ್ವದಾಗಿದ್ದು, ಇಲ್ಲಿರುವ ಬೆಟ್ಟಕ್ಕೂ ಪೂಜಿಸುವುದುಂಟು. ಇಲ್ಲಿಗೆ ಸಮೀಪದ ತಿಪ್ಪೇರುದ್ರಸ್ವಾಮಿ ಬಿಳಿನೀರು ಚಿಲುಮೆ ಇದೆ.

### ೩.೭. ಕಂಪಳರಂಗ ಕ್ಷೇತ್ರ

ಮೊಳಕಾಲ್ಮೂರು ತಾಲ್ಲೂಕಿನಲ್ಲಿರುವ ಕಂಪಳದೇವರ ಹಟ್ಟಿ ಮಹಾಕ್ಷೇತ್ರದ ಚಿನ್ನಹಗರಿ ನದಿದಂಡೆಯ ಮೇಲಿದೆ. ಪ್ರಾಚೀನ ಬೇಡರ ನೆಲೆಯಿಂದ ಇಲ್ಲಿ ಶಿಲಾಯುಗದ ನೆಲೆಗಳು, ಮಾನವಾಕೃತಿ ಕಲ್ಲುಗಳು ಮುಖ್ಯವೆನಿಸಿವೆ. ಸ್ಥಳೀಯರು ತಮ್ಮ ಪವಿತ್ರ ಭಾವನೆಗಳನ್ನು ಆಧ್ಯಾತ್ಮಿಕವಾಗಿ ಹಂಚಿಕೊಂಡಿದ್ದಾರೆ. ಇದಕ್ಕೆ ಚಿಕ್ಕುಂತಿ ಎಂಬ ಮತ್ತೊಂದು ಹೆಸರಿದೆ.

ನಾಯಕರ ಮೂಲ ನೆಲೆಯಾದ ಕಂಪಳ ಕ್ಷೇತ್ರ ಕರ್ನಾಟಕದ ತಿರುಪತಿಯಿದ್ದಂತೆ. ವೈಷ್ಣವ ಸಂಪ್ರದಾಯದ ಮಹಾಕ್ಷೇತ್ರಗಳಲ್ಲಿ ಇದು ಒಂದು. ಶ್ರೀ ಕೃಷ್ಣ ಇಲ್ಲಿ ಬೇಡರನ್ನು ಬೇಟೆಯಿಂದ ಸ್ಥಿತ್ಯಂತರಗೊಳಿಸಿದಂತೆ ಪ್ರಾಣಿ ಹಿಂಸೆಗೆ ವಿದಾಯ ಹೇಳಿದ ಬೇಡರಿಗೆ ಇದು ವರದಾನವಾದ ನೆಲೆ "ಶ್ರೀ ಕೃಷ್ಣನ ಸಂಹಾರವಾಗುವವರೆಗೆ ಒಂದು ಪಂಗಡದಲ್ಲಿದ್ದ ಬೇಡರು ಮತ್ತು ಗೊಲ್ಲರೆಂದು ಇಬ್ಭಾಗವಾಯಿತಂತೆ. ಇಲ್ಲಿ ಸಾಂಸ್ಕೃತಿಕ ಸಂಘರ್ಷ ನಡೆದು ಬೇಟೆಯ ಬೇಡ ಬೇಟೆ ತೊರೆದು ಪಶುಪಾಲನೆ ಕೈಗೊಂಡಿದ್ದು, ಗೊಲ್ಲರು ಗೋಪಾಲಕರಾಗಿ ಮುಂದುವರೆದಿದ್ದು, ಮೇಲಿನ ಘಟನೆ ದೃಢೀಕರಿಸುತ್ತದೆ. ಅಂದಿನಿಂದ ಬೇಡರು ಬೇಟೆ, ಪ್ರಾಣಿ ಹಿಂಸೆ ಕೈ ಬಿಟ್ಟು, ಮಾನವ ಕುಲದ ಒಳಿತಿಗಾಗಿ ಶ್ರಮಿಸಲು ಕರೆ ನೀಡಿ ಗೋಪಾಲನೆ ಮಾಡಲು ೧೨ ಸಾಲಿಗ್ರಾಮ, ಕೊಳಲು, ಮುತ್ತಿನ ಗೆಜ್ಜೆಗಳನ್ನು ಕೊಟ್ಟಿದ್ದರು."[೧೧] ಬೇಟೆ ಸಂಸ್ಕೃತಿಗೆ ಸೇರಿದ ಮ್ಯಾಸಬೇಡರು, ಒಂದು ಕಾಲಕ್ಕೆ ಪಶುಪಾಲಕ ಸಂಸ್ಕೃತಿಯ ಮೂಲಕ್ಕೆ ಸೇರಿದ್ದರು ಎಂಬುದನ್ನು ಈ ದೇವರ ಜಾತ್ರೆಯಲ್ಲಿ ನಡೆಯುವ ಆಚರಣೆಗಳು ಸಾಬೀತುಪಡಿಸುತ್ತವೆ. ಇಲ್ಲಿ ದೇವರ ಹೆಸರಿನಲ್ಲಿ ಬಿಟ್ಟ ನೂರಾರು ದನಗಳು ಇದ್ದು, ಇವನ್ನು ಕಾಯುವ ಪವಿತ್ರ ಕಾಯಕ ಮಾಡುವನನ್ನು 'ಕಿಲಾರಿ' ಎಂದು ಕರೆಯುತ್ತಾರೆ. ಬರಗಾಲದಲ್ಲಿ ಮಾತ್ರ ಊದಬಹುದಾದ ಒಂದು ವಿಶಿಷ್ಟಗಣೆಯೂ ಇಲ್ಲಿದೆ."[೧೨]

### ೩.೮. ಜೋಗಿ (ಗೋರಕ್ಷನಾಥ)

ನುಂಕೆಮಲೆ ಬೆಟ್ಟದಲ್ಲಿ ಕಾಲಭೈರವನ ದೇವಸ್ಥಾನದ ಎಡಭಾಗಕ್ಕೆ ಗೋರಕ್ಷನಾಥ ದೇವಸ್ಥಾನವನ್ನು ಕಾಣಬಹುದು. ಇಲ್ಲಿ ಗೋರಕ್ಷನಾಥನನ್ನು 'ಜೋಗಿ' ಎಂದು ಭಕ್ತಾದಿಗಳು ಕರೆಯುತ್ತಾರೆ. 'ಜೋಗಿ' ಎನ್ನುವ ಪದ 'ಯೋಗಿ' ಎನ್ನುವ ಪದದಿಂದ ಬಂದಿರಬಹುದೆಂದು

ತಿಳಿಯಬಹುದು. ಈ ಹಿಂದೆ ದುರ್ಗಮವಾದ ಈ ಬೆಟ್ಟವು ಧ್ಯಾನಕ್ಕೆ ಯೋಗ್ಯವಾದ ಸ್ಥಳವಾಗಿದ್ದು ಇಲ್ಲಿ ನಾಥಪಂಥದ ಯೋಗಿಗಳು ಧ್ಯಾನಕ್ಕಾಗಿ ಈ ಸ್ಥಳಕ್ಕೆ ಬರುತ್ತಿದ್ದರು ಎಂದು ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ನೋಡುವುದಾದರೆ 'ಯೋಗಿ' ಎಂಬ ಪದವೇ 'ಜೋಗಿ'ಯಾಗಿರಲು ಸಾಧ್ಯ ಎನ್ನುವುದನ್ನು ತಿಳಿಯಬಹುದು. ಇದಕ್ಕೆ ಪೂರಕವಾಗಿ ನಾಯಕನಹಟ್ಟಿ ಬಳಿಯಿರುವ ದೇವರಹಳ್ಳಿಯ ಕಿನ್ನರಿ ಜೋಗಿಗಳು ಪ್ರತಿವರ್ಷ ಜಾತ್ರೆಯ ಸಮಯದಲ್ಲಿ ಬಂದ ಕಪ್ಪಕಾಣಿಕೆ ಕೊಡುವ ಸಂಪ್ರದಾಯವನ್ನು ಕಾಣಬಹುದು. ಹಾಗೂ ನುಂಕೇಮಲೆಯ ಬೆಟ್ಟಗಳಲ್ಲಿ ಒಂದು ಬೆಟ್ಟವನ್ನು "ಜೋಗಪ್ಪಗುಡ್ಡ" ಎಂತಲೂ ಕರೆಯುವ ವಾಡಿಕೆಯಿದೆ. ಮೌಖಿಕ ಚರಿತ್ರೆಯನ್ನು ಅವಲೋಕಿಸಿದರೆ ಈ ಜೋಗಿ ಪರಿಕಲ್ಪನೆ ಬೇರೆಯದೇ ಆದ ಆಯಾಮವನ್ನು ಪಡೆದುಕೊಳ್ಳುತ್ತದೆ.

### ೩.೯. 'ಬಿಳಿನೀರು ಚಿಲುಮೆ' ಅವಧೂತ ಪರಂಪರೆಯ ನೆಲೆ

ಮೊಳಕಾಲ್ಮೂರು ತಾಲ್ಲೂಕಿನ 'ಬಿಳಿನೀರು ಚಿಲುಮೆ' ಎಂಬ ಸ್ಥಳನಾಮವು ಅವಧೂತ ಪರಂಪರೆಯ ನೆಲೆಯಾಗಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಈ ಹಿನ್ನೆಲೆಯಲ್ಲಿ ಅವಧೂತ ಪರಂಪರೆ ಎಂಬ ಅರ್ಥವನ್ನು ಒಳಹೊಕ್ಕು ನೋಡಿದಾಗ ಹುಟ್ಟಿನಿಂದ ಜಾತಿ, ಧರ್ಮ, ಪಂಥಕ್ಕೆ ಸೇರಿದೆ. ಅಂದಂದಿನ ಅನ್ನ ವಸ್ತ್ರಕ್ಕೆ ಮಾತ್ರ ಆಲೋಚಿಸಿ ಶ್ರಮಿಸುವವರು ಅವಧೂತರೆನಿಸಿಕೊಂಡರು. ಬದುಕಿನ ಜಂಜಾಟದಿಂದ ತತ್ತರಿಸಿರುವ ಮಾನವ ಜನಾಂಗಕ್ಕೆ ಬದುಕು ಸುಲಲಿತ ಮತ್ತು ಸುಖದಾಯಕ ಎಂಬ ಮನುಷ್ಯ ಜೀವನದ ವೈಚಾರಿಕ ಪ್ರಜ್ಞೆಯನ್ನು ತನ್ನದೇ ಆದ ತತ್ವ ಹಾಡೂ, ನುಡಿಗಟ್ಟುಗಳ ಮೂಲಕ ಜೀವನ ಪ್ರಜ್ಞೆಯನ್ನು ಎಚ್ಚರಿಸುತ್ತಾರೆ. ಅವಧೂತರು ಒಂದೇ ಕಡೆ ನೆಲೆನಿಲ್ಲದೆ, ನಡೆದಾಡುವ ಚೇತನಗಳಂತೆ ಸಂಚರಿಸಿ, ಐಹಿಕ ಪ್ರಪಂಚದ ಮೋಹವಿರುವ ಜನಗಳನ್ನು ಎಚ್ಚರಿಸಿ, ಜೀವನದ ನಿದರ್ಶನವನ್ನು ತಿಳಿಸಿಕೊಡುತ್ತಾರೆ. ಈ ಹಿನ್ನೆಲೆಯಲ್ಲಿ ನಾಡಿನ ಮೂಲೆ ಮೂಲೆಯಲ್ಲಿ ಇಂತಹ ಅವಧೂತರನ್ನು ಕಾಣಬಹುದು. ಶಿಶುನಾಳ ಷರೀಫ, ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ, ಹುಬ್ಬಳ್ಳಿಯ ಸ್ವಾಮಿಗಳು, ನವಲಂಗುಂದದ ನಾಗಲಿಂಗಯತಿ, ಕೈವಾರದ ನಾರಾಯಣಪ್ಪ, ಎಮ್ಮಿಗನೂರಿನ ಜಡಸಿದ್ಧಯತಿ, ಚೇಳಗುರ್ಕಿಯ ಯರ್‍ರಿತಾತ, ಅಗಡಿಯ ಶೇಷಾಚಲ, ಚಿದಂಬರ ದೀಕ್ಷಿತರು, ಯಡೆಯೂರು ಸಿದ್ದಲಿಂಗಯತಿ, ಗದಗದ ಮಡಿವಾಳಪ್ಪ ಮುಂತಾಗಿ ಹತ್ತಾರು ಅವಧೂತರನ್ನು ಸೂಚಿಸುತ್ತಾ ಹೋಗಬಹುದು. ಮೊಳಕಾಲ್ಮೂರು ಪರಿಸರವು ಸಹ ಅವಧೂತ ಪರಂಪರೆಯಿಂದ ಹೊರತಾಗಿಲ್ಲ. ಈ ಭಾಗದ ಪ್ರಾಂತೀಯ ಸಂಸ್ಕೃತಿಗೆ ವಿವೇಚನಾ ಪ್ರಜ್ಞೆ ಸಂದೇಶವನ್ನು ಕೊಟ್ಟಂತಹ ವ್ಯಕ್ತಿ ರೂಪದ ಶಕ್ತಿಸಂತ ಅವಧೂತ ಪರಂಪರೆಗೆ ಜೀವಂತ ಸಾಕ್ಷಿಯಾಗಿ ಉಳಿದಿರುವಂತಹ ಸ್ಥಳವೇ ಬಿಳಿನೀರು ಚಿಲುಮೆ. ಉದಾಹರಣೆಗೆ ನಾಯಕನಹಟ್ಟಿಯ ತಿಪ್ಪೇರುದ್ರಸ್ವಾಮಿಗಳು. ಇವರು ಒಂದು ಕಡೆ ನೆಲೆನಿಲ್ಲದೆ, ಸಂಚರಿಸುತ್ತಿರುವಾಗ ಕೋನಸಾಗರದ ಹತ್ತಿರ ಬಂದು ನೆಲೆಸಿ, ತಮ್ಮ 'ಪವಾಡ'ವನ್ನು ಮೆರೆದಿದ್ದಾರೆ. ಶ್ರೀ ತಿಪ್ಪೇರುದ್ರ ಸ್ವಾಮಿಗಳು ಪವಾಡ ಪುರುಷರು ಆಗಿರುವುದರಿಂದ ಆಗ ಅವರು ತಮ್ಮ ಬೆತ್ತವನ್ನು ಊರಿದ ಸ್ಥಳದಲ್ಲಿ ಈಗಲೂ ಜಲ ಒಸರುತ್ತಿದ್ದು, ಈ ಸ್ಥಳಕ್ಕೆ 'ಬಿಳಿನೀರು

ಚಿಲುಮೆ' ಎಂದು ಕರೆಯುತ್ತಾರೆ. ಕಾರ್ತಿಕ ಮಾಸದಲ್ಲಿ ಇಲ್ಲಿ ಉತ್ಸವ ಆಚರಿಸುತ್ತಾರೆ. ಈ ಸ್ಥಳದಲ್ಲಿ ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿಗಳು ಕಟ್ಟಿಸಿದ ದೇವಾಲಯವಿದೆ. ಪ್ರಮುಖವಾಗಿ ಅವಧೂತರು ಮಾಡಿದಷ್ಟು ನೀಡು ಭಿಕ್ಷೆ ಎಂಬ ತತ್ವವನ್ನು ಪ್ರಚೋದಿಸಿ ಅವಧೂತರು ಜನತೆಯಲ್ಲಿರುವ ಮೌಢ್ಯತೆಯ ಅಂಧಕಾರವನ್ನು 'ಪವಾಡಗಳು' ಎಂಬ ಉಪಯುಕ್ತ ಕೈಂಕರ್ಯದಿಂದ ಕಣ್ಣು ತೆರೆಸಿದರು ಎನ್ನಬಹುದು.

### ೩.೧೦. ಮೊಳಕಾಲ್ಮೂರು ಪರಿಸರದ ದೇವಾಲಯಗಳು

ಕರ್ನಾಟಕದಲ್ಲಿ ಕಂಡುಬರುವ ದೇವಾಲಯಗಳ ವೈವಿಧ್ಯತೆಯು ಭರತಖಂಡದ ಬೇರೆ ಯಾವ ಭಾಗದಲ್ಲಿಯೂ ಕಂಡುಬರುವುದಿಲ್ಲವೆನ್ನಬಹುದು. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಕಂಡುಬರುವ ಕೆಲವು ಪ್ರಮುಖ ದೇವಾಲಯಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

### ೧. ಶೈವ ದೇವಾಲಯಗಳು

ಜಟಂಗಿ ರಾಮೇಶ್ವರ ದೇವಾಲಯವು ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣವಾಗಿದೆ. ರಾಷ್ಟ್ರಕೂಟರು ಕಲ್ಲಿನ ದೇಗುಲವಾಗಿ ಜೀರ್ಣೋದ್ಧಾರ ಮಾಡುವ ಮೊದಲು ಈ ಜಟಂಗಿ ರಾಮೇಶ್ವರ ದೇವಾಲಯವು ಇಟ್ಟಿಗೆಗಳಿಂದ ನಿರ್ಮಿತವಾಗಿತ್ತು ಎಂಬುದು ಶಾಸನಗಳಿಂದ ದೃಢಪಡಿಸಿಕೊಳ್ಳಬಹುದು. ಕ್ರಿ.ಶ. ೧೦೪೧ರ ಶಾಸನವು ನೊಳಂಬರ ಕಂಕಮಲ್ಲರಸನು ರಾಮೇಶ್ವರ ದೇವರಿಗೆ ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ. "ವೀರ ಕಂಪಲಿರಾಯ ಮತ್ತು ಗಂಡುಗಲಿ ಕುಮಾರರಾಮ ಇವರಿಬ್ಬರೂ ಈ ರಾಮೇಶ್ವರದ ಭಕ್ತರಾಗಿದ್ದರು" ಅಲ್ಲದೆ ಇವರ ಪೂರ್ವಿಕರ ನೆಲೆಯೂ ಮೂಲತಃ ಜಟಂಗಿ ರಾಮೇಶ್ವರವಾಗಿತ್ತು[೧೩] ಎಂಬುದನ್ನು ಪ್ರಸ್ತುತಪಡಿಸುತ್ತದೆ.

ಹಿರೇಕೆರೆ ಹಳ್ಳಿಯ ಕನ್ನೇರಮ್ಮನ ದೇವಾಲಯವು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಿಸಲಾಗಿದೆ. ಚೌಕಾಕಾರದ ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಇದೊಂದು ಶೈವ ದೇವಾಲಯವಾಗಿದ್ದರೂ ಅಲ್ಲಿನ ಸ್ಥಳೀಯರು ಇದನ್ನು ಕನ್ನೇರಮ್ಮ ದೇವಾಲಯವೆಂದು ಕರೆಯುತ್ತಾರೆ. ಇದಕ್ಕೆ ನಿರ್ದಿಷ್ಟ ಕಾರಣ ತಿಳಿದುಬಂದಿಲ್ಲ. ಇದರ ಬಗ್ಗೆ ಅಧ್ಯಯನ ಕೈಗೊಳ್ಳಬಹುದು. ನುಂಕೆಮಲೆಯಲ್ಲಿರುವ ಪೂರ್ವಾಭಿಮುಖವಾದ ಮಲ್ಲಿಕಾರ್ಜುನ ದೇವಾಲಯವನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಿದ್ದು, ಇದೊಂದು ದ್ವಿಕೂಟಾಚಲ ರಚನೆಯಾಗಿದೆ. ಗರ್ಭಗೃಹದ ಪೀಠದ ಮೇಲೆ ಶಿವಲಿಂಗವಿದೆ. ೧೦-೧೧ನೇ ಶತಮಾನದಲ್ಲಿ ಕದಂಬ ಕುರುಹುಗಳಿವೆ. ಈ ಅವಧಿಯಲ್ಲಿ ಸಿದ್ದೇಶ್ವರ ಅಥವಾ ಗೋರಕ್ಷನಾಥ ಮತ್ತು ಕಾಲಭೈರವರ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಸಿದ್ದೇಶ್ವರ ದೇವಾಲಯವು ತೆರೆದ ಮಂಟಪವಾಗಿದೆ. ಇಲ್ಲಿನ ಪದ್ಮಪೀಠದ ಮೇಲೆ ಸಿದ್ದೇಶ್ವರ ಅಥವಾ ಗೋರಕ್ಷನಾಥನ ಮೂರ್ತಿಶಿಲ್ಪವಿದೆ. ಕದಂಬ ವಂಶದ ಬಂಚರಸದೇವನು ನುಂಕೆಮಲೆಯನ್ನು ಆಳುತ್ತಿರುವಾಗ ಈ ದೇವಾಲಯವನ್ನು ಕಟ್ಟಿಸಿ ಅನೇಕ ದಾನದತ್ತಿಗಳನ್ನು ನೀಡಿದ್ದಾನೆ ಎಂಬ ವಿಷಯ ಶಾಸನಗಳಿಂದ ತಿಳಿಯುತ್ತದೆ. ಬ್ರಹ್ಮಗಿರಿಯ ಪಶ್ಚಿಮ ತಪ್ಪಲಿನಲ್ಲಿರುವ

ಉತ್ತರಾಭಿಮುಖವಾಗಿರುವ ಅಕ್ಕನ ಹಾಗೂ ತಂಗಿಯ ದೇವಾಲಯವನ್ನು ಗ್ರ್ಯಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಇದೊಂದು ಶೈವ ದೇವಾಲಯವಾಗಿದ್ದು, ಕಮ್ಮಟ ದುರ್ಗದ ಅರಸರಿಂದ ನಿರ್ಮಿಸಲಾಗಿದೆಯೆಂದು ಚರಿತ್ರೆಯಿಂದ ತಿಳಿದುಬರುತ್ತದೆ. ತಂಗಿ ದೇವಾಲಯವನ್ನು 'ಜೈನ ಬಸದಿ' ಎಂದು ಕರೆಯಲಾಗಿದೆ. ತ್ರಿಶಂಕೇಶ್ವರ ದೇವಾಲಯ ಚೌಕಾಕಾರದ ಗರ್ಭಗೃಹದಲ್ಲಿ ಶಿವಲಿಂಗವಿದೆ. ರಾಯಾಪುರದ ಗುಡಿ ಕಪಿಲೆಯವರ ಹೊಲದಲ್ಲಿ ವಿಜಯನಗರೋತ್ತರ ಕಾಲದ ಬಸವಣ್ಣನ ದೇವಾಲಯವನ್ನು ಗ್ರ್ಯಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಗುಡ್ಡದ ಹಳ್ಳಿಯಲ್ಲಿ ಕೊಲ್ಲಾರಮ್ಮ ದೇವಾಲಯವು ಕೂಡ ಗ್ರ್ಯಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಅಶೋಕ ಸಿದ್ಧಾಪುರದ ವೀರಭದ್ರ ದೇವಾಲಯ ಹಾಗೂ ಶಿರೇಕೊಳದಲ್ಲಿರುವ ಈಶ್ವರ ದೇವಾಲಯವು ಸಂಪೂರ್ಣ ಕಲ್ಲಿನಿಂದ ಕಟ್ಟಿದ ಮಂಟಪವಾಗಿದೆ. ಸಂತೆಗುಡ್ಡದಲ್ಲಿರುವ ನಗರೇಶ್ವರ ದೇವಾಲಯ ವಿಜಯನಗರೋತ್ತರ ಕಾಲದಲ್ಲಿ ನಿರ್ಮಿಸಲಾಗಿದ್ದು, ಕಾಳಮ್ಮ ದೇವಾಲಯವೂ ಕೂಡ ಈ ಊರಿನಲ್ಲಿದೆ. ದೇವಸಮುದ್ರದ ಭೋಗೇಶ್ವರ ದೇವಾಲಯವು ಚೌಕಾಕಾರದ ಗರ್ಭಗೃಹವೊಂದಿದ್ದು ಇದರಲ್ಲಿ ಮೂರ್ತಿಯಿಲ್ಲ.

## ೨. ವೈಷ್ಣವ ದೇವಾಲಯ

ಮೊಳಕಾಲ್ಮೂರು ಪರಿಸರದಲ್ಲಿ ವಿಜಯನಗರೋತ್ತರ ಕಾಲದಲ್ಲಿ ವೈಷ್ಣವ ದೇವಾಲಯಗಳು ನಿರ್ಮಾಣವಾಗಿವೆ. ಚಿಕ್ಕೇರಹಳ್ಳಿಯ ರಾಮದೇವಾಲಯವು ದ್ವಿಕೂಟಾಚಲ ರಚನೆಯಾಗಿದೆ. ಪೂರ್ವಾಭಿಮುಖವಾಗಿರುವ ಚೌಕಾಕಾರದ ಗರ್ಭಗೃಹದಲ್ಲಿ ರಾಮ, ಲಕ್ಷ್ಮಣ, ಸೀತೆಯರ ಮೂರ್ತಿ ಶಿಲ್ಪಗಳಿವೆ. ಅಮುಕುಂದಿಯ ವೆಂಕಟರಮಣ ದೇವಾಲಯ ನಾಗಸಮುದ್ರದ ವೆಂಕಟೇಶ್ವರ ದೇವಾಲಯ ಹಾಗೂ ಅಶೋಕ ಸಿದ್ಧಾಪುರದ ವೆಂಕಟರಮಣಸ್ವಾಮಿ ದೇವಾಲಯವು ವೈಷ್ಣವ ದೇವಾಲಯಗಳಾಗಿದ್ದು ಇವೆಲ್ಲಾ ವಿಜಯನಗರೋತ್ತರ ಕಾಲದಲ್ಲಿ ನಿರ್ಮಿಸಲಾಗಿದೆ ಎಂದು ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ಶೈವ, ವೈಷ್ಣವ, ಜೈನ ಧರ್ಮ ಮತ್ತು ಶಾಕ್ತ ಪಂಥಕ್ಕೆ ಸೇರಿದ ದೇವಾಲಯಗಳಿರುವುದರಿಂದ ಪ್ರಸ್ತುತ ಈ ಪ್ರದೇಶದಲ್ಲಿ ಮೊದಲಿನಿಂದಲೂ ಆಚರಣೆಯಲ್ಲಿದ್ದವೆಂದು ತಿಳಿಯುತ್ತದೆ.

ಮನುಷ್ಯನು ಮನೆಯಲ್ಲಿ ದೇವರಿಗೆ ಪೂಜೆ ಸಲ್ಲಿಸುವುದು ಸ್ವ ಅಭಿವೃದ್ಧಿಗಾದರೆ, ಈ ದೇವಾಲಯದಲ್ಲಿ ಪರಾರ್ಥವಾಗಿ ಪೂಜೆಯನ್ನು ನಡೆಸಲಾಗುತ್ತದೆ. ಇವರುಗಳು ಜನರಲ್ಲಿ ಐಕ್ಯತೆ ಹಾಗೂ ಸಮನ್ವಯತೆಯ ಮನೋಭಾವವನ್ನು ಮೂಡಿಸುತ್ತವೆ. ಮೊಳಕಾಲ್ಮೂರು ಪರಿಸರದ ಅಧ್ಯಯನದಲ್ಲಿ ಕಂಡುಬಂದ ವಿಶೇಷತೆಯೆಂದರೆ ದೇವಾಲಯಗಳಿಂದ ಧಾರ್ಮಿಕ ಇತಿಹಾಸವನ್ನು ನಿರ್ಮಿಸಬಹುದು. ಅಲ್ಲದೇ ಆ ದೇವಾಲಯಗಳಿಗೆ ನೀಡುತ್ತಿದ್ದ ದಾನ ದತ್ತಿಗಳಿಂದ ಹಾಗೂ ಇತರ ವಿಚಾರಗಳಿಂದ ಸ್ವಲ್ಪಮಟ್ಟಿಗಾದರೂ ಆರ್ಥಿಕ ಪರಿಸ್ಥಿತಿಯನ್ನು ವಿವರಿಸಲು ಸಾಧ್ಯವಾಗುತ್ತದೆ.

## ೩.೧೧. ಮೊಳಕಾಲ್ಮೂರು ಪರಿಸರದ ವೀರಗಲ್ಲುಗಳು

'ವೀರ' ಎಂಬ ಪದವು ಮೂಲತಃ ಸಂಸ್ಕೃತ ಭಾಷೆಯಿಂದ ಉತ್ಪತ್ತಿಯಾಗಿದ್ದು, ಈ ಭಾಷೆಯಿಂದ ನೇರವಾಗಿ ಕನ್ನಡ ಮತ್ತು ಇತರ ಭಾಷೆಗಳಲ್ಲಿಯೂ ಈ ಪದವು ತನ್ನ ಮೂಲಾರ್ಥವನ್ನು ಉಳಿಸಿಕೊಂಡು ಬಂದಿದೆ. ವೀರನೊಬ್ಬನು ರಣರಂಗದಲ್ಲಿ ಹೋರಾಡಿ ವೀರಮರಣ ಹೊಂದಿದರೆ ಅವನ ಶಾಶ್ವತ ನೆನಪಿಗಾಗಿ ಪ್ರತಿಷ್ಠಾಪಿಸುವ ಶಿಲೆಗಳನ್ನು ವೀರಗಲ್ಲುಗಳು ಎಂದು ಕರೆಯುವರು. ಆರಂಭಿಕ ಹಂತದಲ್ಲಿ ವೀರಸ್ಮರಣಾರ್ಥ ಗುಂಡುಕಲ್ಲುಗಳನ್ನು, ಆಮೇಲೆ ನಿರ್ದಿಷ್ಟಪಡಿಸುವ ಶಿಲೆಯಲ್ಲಿ ಶಿಲ್ಪಗಳ ಉಬ್ಬು ಕಲ್ಪನೆಯನ್ನು ನಂತರ ಕಾಲಗಳಲ್ಲಿ ವೀರಮರಣ ಹೊಂದಿದ ಹೆಸರಿನಲ್ಲಿ ದೇವಾಲಯಗಳನ್ನು ಕಟ್ಟಲಾಗುತ್ತಿತ್ತೆಂದು ಅಭಿಪ್ರಾಯಪಟ್ಟಿದ್ದಾರೆ. ರನ್ನನ ಗದಾಯುದ್ಧ ಅಥವಾ ಸಾಹಸಭೀಮ ವಿಜಯ ಎಂಬ ಕಾವ್ಯದಲ್ಲಿ "ತುರುಗೋಳಿನಲ್ಲಿ, ಪೆಣ್ಮಯ್ಯಲ್‌ನಲ್ಲಿ, ಸ್ವಾಮಿ ಕಾರ್ಯದಲ್ಲಿ, ನೆಂಟರಿಗೆ ತೊಂದರೆ ಆದಾಗ, ಊರು ನಾಶವಾದಾಗ, ಯಾವನು ದೃಢನಿರ್ಧಾರ ಮಾಡಿ ತನ್ನ ಗಡಸುತನವನ್ನು ಮರೆಯುವುದಿಲ್ಲವೋ ಅವನು ಗಂಡನಲ್ಲ ನಪುಂಸಕ"[೧೪] ಎಂಬ ಮಾತನ್ನು ದ್ರೌಪದಿಯ ಬಾಯಿಂದ ಆಡಿಸಿದ್ದಾನೆ.

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ವೀರಗಲ್ಲುಗಳ ಸಂಖ್ಯೆ ಗಣನೀಯವಾಗಿ ಸಾಕಷ್ಟಿವೆ. ಇವು ಇತಿಹಾಸವನ್ನು ಮರುಕಳಿಸುತ್ತವೆ. ಭಾರತೀಯರಿಗೆ ಪ್ರಾಚೀನ ಕಾಲದಲ್ಲಿ ಗೋವುಗಳು ಪವಿತ್ರ ಹಾಗೂ ಪೂಜ್ಯನೀಯವಾದವುಗಳಾಗಿವೆ. ಕೃಷಿ ಚಟುವಟಿಕೆಯಲ್ಲಿ ಪ್ರಮುಖ ಪಾತ್ರವಹಿಸುವ ಹಸುಗಳು ಆರ್ಥಿಕ ಹಾಗೂ ವಿನಿಮಯ ಸಾಧನಗಳಾಗಿವೆ. ಹಸುಗಳನ್ನು ಅಪಹರಿಸುವ ಸಂದರ್ಭದಲ್ಲಿ ಹೋರಾಡಿ ವೀರಮರಣ ಹೊಂದಿದ ಕೆಲವು ವೀರಗಲ್ಲುಗಳು ಅಧ್ಯಯನ ಕ್ಷೇತ್ರ ಮುತ್ತಿಗಾರಹಳ್ಳಿ ಹಾಗೂ ಮಾಚೇನಹಳ್ಳಿಯಲ್ಲಿ ವೀರನ ಸುತ್ತ ಐದಾರು ದನಗಳು ಕೆತ್ತನೆಗಳಿರುವ ವೀರಗಲ್ಲುಗಳು ದೊರೆತಿವೆ. ಕಷ್ಟದಲ್ಲಿದ್ದ ಹೆಣ್ಣನ್ನು ರಕ್ಷಿಸಿ ಮಾನ ಉಳಿಸಿ ಹೋರಾಡಿ ಮಡಿದ ವೀರಗಲ್ಲುಗಳು 'ಅಮುಕುಂದಿಯ' ವೀರಗಲ್ಲು ಒಬ್ಬ ಸ್ತ್ರೀ ಒಂದು ಮಗುವನ್ನು ಸೊಂಟದಲ್ಲಿ ಎತ್ತಿಕೊಂಡು ತನ್ನ ಸಹಾಯಕಿಯೊಂದಿಗೆ ಹೋರಾಟದ ದೃಶ್ಯವನ್ನು ನೋಡುತ್ತಾ ನಿಂತಿದ್ದಾಳೆ. ರಾಮಸಾಗರದ ವೀರಗಲ್ಲಿನಲ್ಲಿ ಏಳೆಂಟು ಸ್ತ್ರೀಯರು ಇರುವ ಚಿತ್ರಗಳನ್ನು ಕೆತ್ತಲಾಗಿದೆ. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ವಿವಿಧ ಭಾಗಗಳಲ್ಲಿ ದೊರೆತ ವೀರಗಲ್ಲುಗಳನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದೆ. ಉದಾಹರಣೆಗೆ ಹನುಮನ ಗುಡ್ಡದಲ್ಲಿ ಆದಿರಾಮ, ಅಶೋಕ ಸಿದ್ದಾಪುರ, ಬಿ.ಜಿ.ಕೆರೆಗಳಲ್ಲಿ 'ಕಾಮಣ್ಣ' ಗೌರಸಮುದ್ರ ಹಾಗೆ ಉರುತಾಳಿಗಳಲ್ಲಿ ವೀರಗಾರರು ಎಂದು ಸಂಬೋಧಿಸಲಾಗುತ್ತದೆ. ಕರಡಿ ಹಳ್ಳಿಯಲ್ಲಿ ತಾತ–ತಾತಪ್ಪರ ಕಲ್ಲುಗಳೆಂದು ಕರೆಯಲಾಗುತ್ತದೆ. ರಾಮಸಾಗರದಲ್ಲಿನ ವೀರಗಲ್ಲಿನಲ್ಲಿ ಸೊಂಟಕ್ಕೆ ಖಡ್ಗವನ್ನು ಸಿಕ್ಕಿಸಿಕೊಂಡು ತನ್ನ ಎರಡು ಕೈಗಳನ್ನು ಜೋಡಿಸಿ ಅಂಜಲಿ ಮುದ್ರೆಯ ಭಂಗಿಯಲ್ಲಿರುವ ವೀರನನ್ನು ಕೆತ್ತಲಾಗಿದೆ"[೧೫] ಬ್ರಹ್ಮಗಿರಿ ಬೆಟ್ಟದ ಪಶ್ಚಿಮ ತಪ್ಪಲಿನ ಅಕ್ಕ ತಂಗಿಯರ ದೇವಾಲಯಗಳ ಬಳಿ ೧೦ ವೀರಗಲ್ಲುಗಳು ದೊರೆತಿವೆ. ಹಿರೇಕೆರೆಹಳ್ಳಿ, ಚಿಕ್ಕುಂತಿ, ಮಾಚೇನಹಳ್ಳಿಗಳಲ್ಲಿ ಕಂಡುಬರುವ ಅಪ್ಸರೆಯರು ಮಾಡಿದ

ವೀರನನ್ನು ಪುಷ್ಪಕ ವಿಮಾನದಲ್ಲಿ ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಕೆತ್ತನೆಗಳಿವೆ. ನಾಗಸಮುದ್ರದ ವೀರಗಲ್ಲಿನಲ್ಲಿ ವೀರನು ಕುದುರೆ ಮೇಲೆ ಕುಳಿತ ತನ್ನ ಸಹಚರರ ಜೊತೆಗೂಡಿ ಹುಲಿಯೊಂದಿಗೆ ಹೋಗುತ್ತಿದ್ದಾನೆ. ಹುಲಿಯ ಹಿಂಭಾಗವನ್ನು ನಾಯಿಕಚ್ಚಿದೆ. ಕಪ್ಪಡಬಂಡೆಯ ಹಟ್ಟಿಯಲ್ಲಿ ವೀರನಾದ ಎರ್ರಮಂಚಯ್ಯನ ಮಗ ಚಿರತೆಯೊಂದಿಗೆ ಹೋರಾಡುವ ದೃಶ್ಯ ಕೆತ್ತಲಾಗಿದೆ.

### ಮಾಸ್ತಿಗಲ್ಲು

ಒಬ್ಬ ವೀರನು ರಣರಂಗದಲ್ಲಿ ಹೋರಾಡಿ ವೀರಮರಣ ಹೊಂದುತ್ತಾನೆ. ಇದರಿಂದ ಅವನ ಹೆಂಡತಿಯು ವೀರ ಮರಣ ಹೊಂದಿ ಸ್ವರ್ಗವನ್ನು ಸೇರಿದರೆ, ಅವಳ ಶಾಶ್ವತ ಸ್ಮರಣೆಗಾಗಿ ನಿರ್ಮಿಸಿದ ಶಿಲೆಗಳನ್ನು ಮಾಸ್ತಿಕಲ್ಲುಗಳೆಂದು ಕರೆಯಲಾಗುತ್ತದೆ. ಅಧ್ಯಯನ ಕ್ಷೇತ್ರ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಹಲವಾರು ಮಾಸ್ತಿಕಲ್ಲುಗಳನ್ನು ಕಾಣಬಹುದು. ಬಾಂಡ್ರಾವಿಯ ಮಾಸ್ತಿಕಲ್ಲಿನಲ್ಲಿ ಎತ್ತಿದ ಬಲಗೈಯಲ್ಲಿ ನಿಂಬೆಹಣ್ಣನ್ನು ಹಿಡಿದಿರುವ ಮಹಾಸತಿಯನ್ನು ಸ್ಥಳೀಯರು 'ಗರ್ಭಲಕ್ಷ್ಮಿ' ಎಂದು ಕರೆಯುತ್ತಾರೆ. ಈ ಊರಿನಲ್ಲಿ ಯಾವುದೇ ಗರ್ಭಿಣಿ ಸ್ತ್ರೀಗೆ ಹೆರಿಗೆಯು ಕಷ್ಟವಾದರೆ, ಈ ಶಿಲೆಯನ್ನು ಬೋರಲು ಹಾಕಿದಾಗ ಹೆರಿಗೆಯು ಸುಗಮವಾಗುತ್ತದೆಂದು ಅಲ್ಲಿನ ಜನರ ನಂಬಿಕೆಯಿದೆ. ಹೆರಿಗೆಯಾದ ತಕ್ಷಣ ಈ ಶಿಲೆಯನ್ನು ನೆಟ್ಟಗೆ ನಿಲ್ಲಿಸಿ ಪೂಜೆ ಪುರಸ್ಕಾರಗಳನ್ನು ಸಲ್ಲಿಸುತ್ತಾರೆ. ಹಾಗಾದರೆ ಈ ಮಾಸ್ತಿಗಲ್ಲಿನಲ್ಲಿರುವ ಮಹಾಸತಿಯು ಗರ್ಭಿಣಿಯಾಗಿದ್ದಳೇ ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಇದೇ ರೀತಿಯ ಸಾಮಾನ್ಯ ಲಕ್ಷಣಗಳಿರುವ ಹಾಗೂ ಆಚರಣೆಗಳನ್ನು ಚಾಚು ತಪ್ಪದೇ ಪಾಲಿಸಿಕೊಂಡು ಬರುತ್ತಿರುವ ಗೌರಸಮುದ್ರ, ಮಾಚೇನಹಳ್ಳಿಗಳಲ್ಲಿ ಈ ತರಹದ ಮಾಸ್ತಿಗಲ್ಲುಗಳಿವೆ ಎಂಬುದು ಒಂದು ವಿಶಿಷ್ಟ ಹಾಗೂ ವೈವಿಧ್ಯಮಯವಾದ ಸಂಗತಿ ಎನ್ನಬಹುದು.

### ೩.೧೨. ಮೊಳಕಾಲ್ಮೂರು ಪರಿಸರದ ಕೋಟೆಗಳು

ಮನುಷ್ಯ ಸಂಘ ಮತ್ತು ಸಮಾಜ ಜೀವಿ. ಹಲವಾರು ಜನರು ಒಟ್ಟಾಗಿ ಬದುಕುತ್ತಿದ್ದು, ಇದರಿಂದ ಕುಟುಂಬ ವ್ಯವಸ್ಥೆಯು ಬೆಳೆಯಿತು. ಅನೇಕ ಕುಟುಂಬಗಳು ಸೇರಿ ಗ್ರಾಮ, ಪಟ್ಟಣ, ನಗರಗಳಾಗಿ ಪರಿಣಮಿಸಿದವು. ಇವುಗಳೆಲ್ಲ ಮುಂದೆ ಒಂದು ರಾಜ್ಯ ವ್ಯವಸ್ಥೆಯಾಗಿ ಬೆಳೆಯಲು ಕಾರಣೀಭೂತವಾದವು. ಹೀಗೆ ಅವನು ಬೇರೆಯವರ ಆಕ್ರಮಣದಿಂದ ತನ್ನನ್ನು ತನ್ನ ಕುಟುಂಬ ಗ್ರಾಮ ಹಾಗೂ ರಾಜ್ಯವನ್ನು ರಕ್ಷಿಸಿಕೊಳ್ಳಲು ಕೋಟೆಗಳನ್ನು ಕಟ್ಟಿಕೊಂಡನು. ಕೋಟೆ ಎಂದರೆ ಗಟ್ಟಿಯಾದ ಸ್ಥಳ, ಜನರು ವಾಸಿಸುವ ಇಂತಹ ಗಟ್ಟಿಯಾದ ಸ್ಥಳದಲ್ಲಿ ರಕ್ಷಣೆ ಹಾಗೂ ಭದ್ರತೆಯನ್ನು ಒದಗಿಸುವುದು ಎಂದರ್ಥ. ಸಾಮಾನ್ಯವಾಗಿ ಕೋಟೆಯನ್ನು ದುರ್ಗ, ಕಿಲ್ಲೆ ಹಾಗೂ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ. ಒಟ್ಟಿನಲ್ಲಿ ಕೋಟೆಗಳು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿವೆ.

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ವಿವಿಧ ಕಾಲಘಟ್ಟದಲ್ಲಿ ನಿರ್ಮಾಣವಾದ ಕೋಟೆಗಳು ಕಂಡುಬರುತ್ತವೆ. "ಆಯಾಕಟ್ಟಿನ ಸ್ಥಳವಾದ ನುಂಕೆಮಲೆಯಲ್ಲಿ ನುಂಕೆ ಕೋಟೆಯನ್ನು ಹೊಂದಿದ್ದರೆಂದು ಕದಂಬರ ದಾಖಲೆಗಳಲ್ಲಿ ಉಲ್ಲೇಖಿಸಲಾಗಿದೆ."[೧೬] ಕ್ರಿ.ಶ. ೧೦ನೆಯ ಶತಮಾನದ ನುಂಕೆಮಲೆಯನ್ನು ಕೇಂದ್ರವಾಗಿ ಮಾಡಿಕೊಂಡು ಕದಂಬ ಶಾಖಾ ಮನೆತನದ ಮಯೂರ ವರ್ಮನು ಆಳ್ವಿಕೆ ಮಾಡುವಾಗ ಈ ನುಂಕೆ ಕೋಟೆ ಕಟ್ಟಿರಬಹುದು. ಬ್ರಹ್ಮಗಿರಿಯ ಮೇಲಿರುವ ಕೋಟೆಯನ್ನು ಹಾನೆಯ ಕೋಟೆಯೆಂದು ಕರೆಯಲಾಗುತ್ತದೆ. ನಿಡುಗಲ್ಲು ರಾಜಧಾನಿಯಾದ ಕ್ರಿ.ಶ. ೧೩ನೇ ಶತಮಾನದ ಅಂತ್ಯದವರೆಗೆ ಆಳ್ವಿಕೆ ನಡೆಸಿದ ಚೋಳ ಮಹಾರಾಜನಿಗೆ 'ಹನೆಯ ಕೋಟೆ' ಉಪರಾಜಧಾನಿಯಾಗಿತ್ತು ಎಂದು ವ್ಯಕ್ತಪಡಿಸಿದ್ದಾರೆ."[೧೭] ಚೋಳ ಮಹಾರಾಜರಲ್ಲಿ ಹೆಸರಾದ ಬೊಮ್ಮ ಭೂಪಾಲರದ ದಂಡನಾಯಕನಾದ ಬೈಚಪ್ಪನು ನಿರ್ಮಿಸಿದನು. ವೀರಬಲ್ಲಾಳನು ತನ್ನ ರಾಜ್ಯದ ಮೇರೆಯಲ್ಲಿದ್ದ ಹನೆಯ ಕೋಟೆಯನ್ನು ಜಯಿಸಿ 'ವಿಜಯಗಿರಿ' ಎಂಬ ಪಟ್ಟಣವನ್ನು ನಿರ್ಮಿಸಿದನು. ಮೊಳಕಾಲ್ಮೂರು ಉತ್ತರಕ್ಕಿರುವ ಬೆಟ್ಟದ ಮೇಲೆ ನಾಯಕನಹಟ್ಟಿಯ ಕಸ್ತೂರಿ ಮಲ್ಲಪ್ಪನಾಯಕನು ನಿರ್ಮಿಸಿದ ಕೋಟೆಯಿದೆ. ಹಾನಗಲ್ಲು, ಹನುಮನಗುಡ್ಡ, ಸಂತೆಗುಡ್ಡಗಳಲ್ಲಿ ಗ್ರಾಮಗಳ ಪಕ್ಕದಲ್ಲಿ ಗುಡ್ಡಗಳಿದ್ದು, ಇವುಗಳಲ್ಲಿ ಕೋಟೆ, ಗೋಡೆಗಳು ಹಾಗೂ ಅಲ್ಲಲ್ಲಿ ಬೆಟ್ಟಗಳ ತುದಿಗಳಲ್ಲಿ ಕಾವಲು ಗೋಪುರಗಳಿರುವುದನ್ನು ನೋಡಬಹುದು.

### ೩.೧೩. ಶಾಸನಗಳು

ಶಾಸನ ಎಂದರೆ ರಾಜರ ಅಪ್ಪಣೆ ಅಥವಾ ರಾಜಾಜ್ಞೆಯಾಗಿದೆ. ಕಲ್ಲಿನ ಮೇಲೆ ಕೆತ್ತಿದ ಅಥವಾ ಕೊರೆದ ಬರವಣಿಗೆಯನ್ನು ಶಿಲಾಶಾಸನವೆಂದು ಕರೆಯಲಾಗುತ್ತದೆ. ಭಾರತದ ಉಪಖಂಡದಲ್ಲಿ ಅಶೋಕನೇ ಪ್ರಥಮ ಬಾರಿಗೆ ಪೂರ್ಣಪ್ರಮಾಣದ ಶಾಸನಗಳನ್ನು ಹೊರಡಿಸಿದ್ದರಿಂದ ಅವನನ್ನು ಭಾರತೀಯ ಶಾಸನಗಳ ಆದ್ಯ ಪ್ರವರ್ತಕನೆಂದು ಕರೆಯಲಾಗಿದೆ. ಅಶೋಕನು ತಾನು ಹೊರಡಿಸಿದ ಶಾಸನಗಳಿಗೆ ಧರ್ಮಲಿಪಿ, ಪ್ರಾಕೃತ, ಬಲದಿಂದ ಎಡಕ್ಕೆ ಬರೆಯುವ ಖರೋಷ್ಠಿ ಲಿಪಿಯನ್ನು ಬಳಸಿದ್ದಾನೆ.

ಅಧ್ಯಯನ ಕ್ಷೇತ್ರ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಜಟಂಗಿ ರಾಮೇಶ್ವರ, ಅಶೋಕ ಸಿದ್ಧಾಪುರ, ಬ್ರಹ್ಮಗಿರಿ ಈ ಶಾಸನಗಳು ೧೮೯೨ರಲ್ಲಿ ಲೂಯಿ ರೈಸ್ ಪತ್ತೆ ಹಚ್ಚಿದರು. ಚಿನ್ನಹಗರಿಯ ಎಡಬಲ ದಂಡೆ ಬೆಟ್ಟಗಳಲ್ಲಿ ಮೂರು ಶಾಸನಗಳನ್ನು ಒರಟಾದ ಹುಟ್ಟು ಹೆಬ್ಬಂಡೆಗಳ ಮೇಲೆ ಕೆತ್ತಲಾಗಿದೆ. ಬ್ರಹ್ಮಗಿರಿ ಶಾಸನವನ್ನು ಸ್ಥಳೀಯರು 'ಅಕ್ಷರ ಗುಂಡು' ಎಂದು ಕರೆಯಲಾಗುತ್ತದೆ. ೧೩ ಸಾಲುಗಳನ್ನು ಒಳಗೊಂಡಿದ್ದು, ಇದರಲ್ಲಿ ಎಲ್ಲಾ ಸಾಲುಗಳು ಬ್ರಾಹ್ಮಿಲಿಪಿಯಲ್ಲಿದ್ದು, ಕೊನೆಯಲ್ಲಿ "ಲಿಪಿಕರೇಣ ಚಪಡ" ಎಂಬ ಪದವನ್ನು ಮಾತ್ರ ಖರೋಷ್ಠಿ ಲಿಪಿಯಲ್ಲಿ ಬರೆಯಲಾಗಿದೆ. ಈ ಶಾಸನದಲ್ಲಿ ಉಲ್ಲೇಖಿತವಾಗಿರುವ 'ಸುವರ್ಣಗಿರಿ' ಎಂಬುದು ವಿದ್ವಾಂಸರ ಗಮನ ಸೆಳೆದಿದೆ. 'ಇಸಿಲಾ' ಎಂಬ ಪದ ತಜ್ಞರಲ್ಲಿ ಕುತೂಹಲ ಕೆರಳಿಸಿದೆ. ಬ್ರಹ್ಮಗಿರಿ ಸಮೀಪದ ಸಿದ್ಧಾಪುರದಲ್ಲಿದ್ದ ಸಿದ್ದರಿಂದ 'ಇಸಿಲ'ವಾಗುವ ಸಾಧ್ಯತೆ ಇದೆಯೆಂದು

ರೈಸ್‌ರವರು ಅಭಿಪ್ರಾಯಪಟ್ಟಿದ್ದಾರೆ. ಬಹುಶಃ ಬೌದ್ಧ ಭಿಕ್ಷುಗಳು ಅಥವಾ ಬೌದ್ಧ ಧರ್ಮ ಪ್ರಚಾರಕರು ಇಲ್ಲಿ ನೆಲೆಸಿದ್ದರಿಂದ ಈ ನೆಲೆಗೆ ಸಿದ್ದರಪುರ (ಸಿದ್ಧಪುರ) ಎಂಬ ಹೆಸರು ಬಂದಿರಬಹುದೆಂದು ಅವರ ಊಹೆಗೆ ಕಾರಣವಿರಬೇಕು. ಅಶೋಕ ಸಿದ್ಧಾಪುರದ ಶಾಸನ ಬಂಡೆಯನ್ನು 'ಎಮ್ಮೆತಮ್ಮನ ಗುಂಡು' ಎಂದೇ ಜಟಂಗಿ ರಾಮೇಶ್ವರ ಗುಡ್ಡದ ಶಾಸನವನ್ನು 'ಬಳೆಗಾರರ ಗುಂಡು' ಎಂದು ಜನ ಸಂಬೋಧಿಸುತ್ತಾರೆ. ಜಟಂಗಿ ರಾಮೇಶ್ವರ ಬೆಟ್ಟದಲ್ಲಿರುವ ಕ್ರಿ.ಶ. ೯೬೧ರ ಶಿಲಾಶಾಸನವು ರಾವಣನು ಸೀತೆಯನ್ನು ಅಪಹರಿಸಿದಾಗ ಜಟಾಯು ಕಾದಾಡಿ ಸತ್ತಂತಹ ಸ್ಥಳದಲ್ಲಿ ರಾಮನ ಪ್ರತಿಷ್ಠೆಗಾಗಿ ಒಂದು ಲಿಂಗವನ್ನು ಪ್ರತಿಷ್ಠಾಪಿಸಿ, ಅಲ್ಲಿ ಒಂದು ದೇವಾಲಯವನ್ನು ಕಟ್ಟಿಸಿ ಕಳಸವನ್ನಿಟ್ಟು ನಿರ್ಮಿಸಿ ದತ್ತಿಯನ್ನು ನೀಡಿರುವುದನ್ನು ಉಲ್ಲೇಖಿಸುತ್ತದೆ. ಇದೇ ಬೆಟ್ಟದಲ್ಲಿ ಸುಮಾರು ೧೨ ಶಾಸನಗಳು ಈ ದೇವಾಲಯ ಜೀರ್ಣೋದ್ಧಾರಕ್ಕಾಗಿ ಹಾಗೂ ನೈವೇದ್ಯ ರಂಗಭೋಗದ ವೈಭವಕ್ಕಾಗಿ ಹಲವಾರು ಗ್ರಾಮಗಳನ್ನು ದತ್ತಿ ದಾನ ನೀಡಿದ ವಿವರಗಳು ದೊರೆಯುತ್ತವೆ. ನುಂಕೆಮಲೆ ಬೆಟ್ಟದ ಮಲ್ಲಿಕಾರ್ಜುನ ದೇವಾಲಯದ ಹಿಂದೆ ಪಶ್ಚಿಮದ ಹುಟ್ಟು ಗುಂಡಿನಲ್ಲಿರುವ ಶಾಸನ ಕದಂಬರ ಅಜವರ್ಮ ಅರಸರು ನುಂಕೇಶ್ವರ ದೇವರಿಗೆ ದಾನ ಬಿಟ್ಟ ವಿಚಾರವನ್ನು ಪ್ರಸ್ತಾಪಿಸುತ್ತದೆ. ಹೀಗೆ ಈ ಬೆಟ್ಟದಲ್ಲಿ ಇನ್ನೂ ಇತರ ಶಾಸನಗಳಿದ್ದು, ರಾಜರ ಹಾಗೂ ದಾನ-ದತ್ತಿಗಳ ವಿಚಾರವನನು ಸ್ಪಷ್ಟಪಡಿಸುತ್ತದೆ. ಹಳೆದಡಗೂರಿನ ಕ್ರಿ.ಶ. ೧೦೭೧ರ ಶಾಸನ ದಡಗೂರಿನ ಕಲಿದೇವರಿಗೆ ನೀಲಕಂಠಜಿಯರಿಗೆ ೧೨ ಮಸ್ತರು ಭೂಮಿಯನ್ನು ದಾನ ಮಾಡಿರುವುದು ಉಲ್ಲೇಖಿಸುತ್ತದೆ.[೮] ಕ್ರಿ.ಶ. ೧೨೯೦ ರೊದ್ದದ ಬಡಕಲುಕುಂಟೆ ಬಳಿಯ ಗುಂಡಿನ ಶಾಸನ ಬಿಜಣದೇವನು ಶ್ರೀ ಬ್ರಹ್ಮೇಶ್ವರ ಮತ್ತು ರೊದ್ಧ ಗ್ರಾಮಗಳ ಗೋವುಗಳನ್ನು ದಾನ ಮಾಡಿರುವುದು ಉಲ್ಲೇಖಿಸುತ್ತದೆ. ಇದರಿಂದ ತಿಳಿಯುವ ಮಹತ್ವ ವಿಷಯವೆಂದರೆ, ಇಲ್ಲಿ ಪ್ರಸ್ತಾಪಿಸಿರುವ ಬ್ರಹ್ಮೇಶ್ವರ ಮತ್ತು 'ರೊದ್ದ' ಈಗಿನ ಬ್ರಹ್ಮಗಿರಿ ಮತ್ತು ರೊಪ್ಪಗಳಿರಬಹುದು ಎಂದು ಊಹಿಸಬಹುದು. ಕರಡಿಹಳ್ಳಿಯ ಪಟೇಲರ ವಶದಲ್ಲಿದ್ದ ತಾಮ್ರ ಶಾಸನವು ವಿಜಯನಗರದ ಹರಿಹರನನ್ನು ಕುರಿತು ವಿವರಿಸುತ್ತದೆ. ಹರಿಹರಪುರ ಎಂಬ ಪ್ರತಿನಾಮ ಧ್ಯೇಯ ಹೊಂದಿದ್ದು ಈ ಗ್ರಾಮದ ದಾನದತ್ತಿ ವಿವರಗಳನ್ನು ಸ್ಪಷ್ಟಪಡಿಸುತ್ತದೆ. ನಾಗಸಮುದ್ರದ ಊರ ಬಾಗಿಲು ಬಳಿಯಿರುವ ೧೫೫೫ರ ಶಿಲಾಶಾಸನ ಸದಾಶಿವರಾಯನ ಕಾಲದಲ್ಲಿ ನಾಗಸಮುದ್ರದ ತಿಮ್ಮನಗೌಡನು ಕೆಲವೊಂದು ದಾನದತ್ತಿಗಳನ್ನು ನೀಡಿದ್ದನ್ನು ಮುಂದಿರುವ ಕ್ರಿ.ಶ. ೧೫೫೬ರ ಶಿಲಾಶಾಸನ ಸದಾಶಿವರಾಯನ ಆಳ್ವಿಕೆಗೆ ಸಂಬಂಧಿಸಿದ ಶಾಸನವಾಗಿದೆ. ಕ್ರಿ.ಶ. ೧೫೫೬ರ ಮುರಡಿ ಗ್ರಾಮದ ಬಸವನ ಗುಡಿಯ ಹಿಂದಿರುವ ಶಿಲಾಶಾಸನ 'ಮುರಡಿ' ಗ್ರಾಮವನ್ನು ಅಗ್ರಹಾರವನ್ನಾಗಿ ಪರಿವರ್ತಿಸಿದ ವಿಷಯ ಪ್ರಸ್ತಾಪಿಸುತ್ತದೆ.

೧೬೬೫ರ ಸಂತೇಗುಡ್ಡದ ಈಶ್ವರಯ್ಯನವರಲ್ಲಿದ್ದ ತಾಮ್ರದ ಶಾಸನ 'ಬಾಣರವಿ' ದೇವಸ್ಥಾನಕ್ಕೆ ಭೂಮಿಯನ್ನು ದಾನ ಮಾಡಿದ ವಿವರವನ್ನು ಸ್ಪಷ್ಟಪಡಿಸುತ್ತದೆ. ಮೊಳಕಾಲ್ಮೂರು ಬೆಟ್ಟದ ಮೇಲಿರುವ ಶಾಸನ ಕಾಳಿದಾಸನನ್ನು ಸ್ತುತಿಸುವ 'ಯಮಶ್ಲೋಕ' ಕಂಡುಬರುತ್ತದೆ. ಮೊಳಕಾಲ್ಮೂರು

ತಾಲ್ಲೂಕಿನಲ್ಲಿ ದೊರೆತ ಅಶೋಕನ ಶಿಲಾಶಾಸನಗಳು ಅಂದಿನ ಕಾಲದ ಸಾಮಾಜಿಕ ಸ್ಥಿತಿಯನ್ನು ಸ್ವಲ್ಪ ಮಟ್ಟಿಗಾದರೂ ಪರಿಚಯಿಸುತ್ತವೆ. ಒಂದು ದೇಶದ ಇತಿಹಾಸವನ್ನು ರಚಿಸಲು ಶಾಸನಗಳು ಪ್ರಮುಖವಾದ ಪಾತ್ರವಹಿಸುತ್ತವೆ. ಸಾಹಿತ್ಯದ ಹಾಗೂ ಇತರ ಆಧಾರಗಳು ಇತಿಹಾಸವನ್ನು ರಚಿಸಲು ಮೌನ ತಾಳಿದಾಗ ಈ ಶಾಸನಗಳು ಸಹಾಯವಾಗುತ್ತದೆ. ಹಾಗೆಯೇ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೪೭ ಶಾಸನಗಳು ಇದ್ದು, ಆ ಕಾಲದ ಚರಿತ್ರೆ ಮತ್ತು ಸಾಂಸ್ಕೃತಿಕ ವೈಭವವನ್ನು ಕಣ್ಮುಂದೆ ಕಟ್ಟಿಕೊಡುತ್ತದೆ.

### ೩.೧೪. ಮೊಳಕಾಲ್ಮೂರು ಪರಿಸರದ ಪ್ರಮುಖ ಜಾತ್ರೆಗಳು

"ತೇರಾದ ಮೇಲೆ, ಜಾತ್ರೆ ನಡೆಯಿತು ತೇರು ಆಯಿತು ಹೆಸರು ಮಾತ್ರ ವ್ಯರ್ಥ ತಂದೆ" ಎಂಬ ಗಾದೆಗಳನ್ನು ಅವಲೋಕಿಸಿದಾಗ ಜಾತ್ರೆಗಳು ಜನಪದ ಸಂಸ್ಕೃತಿಯ ವಿಶಿಷ್ಟ ಪ್ರಕಾರವೆನ್ನಬಹುದು. ಜಾತ್ರೆ, ತೇರು, ಪರಿಷೆ, ರಥೋತ್ಸವ, ಪಲ್ಲಕ್ಕಿ ಇತ್ಯಾದಿ ಯಾವ ಹೆಸರಿನಿಂದ ಕರೆದರೂ ಎಲ್ಲಾ ಜಾತ್ರೆಗಳ ಸ್ವರೂಪ ಒಂದೇ, ಅಪಾರ ಜನಜಂಗುಳಿ, ಗದ್ಧಲ, ಮನೋರಂಜನೆ, ಆಟೋಟಗಳು, ವಿವಿಧ ರೀತಿಯ ಸರಕುಗಳ ವ್ಯಾಪಾರ, ದೇವರನ್ನು ಮೆರೆಸುವಿಕೆ, ಭಕ್ತಿ-ಭಾವ ಸಮರ್ಪಣೆಯ ಹರಕೆ, ಇವು ಎಲ್ಲಾ ಜಾತ್ರೆಗಳ ಸಾಮಾನ್ಯ ನೋಟ. ಮಾನವ ದೇವರು ಧರ್ಮಗಳಲ್ಲಿನ ನಂಬಿಕೆ, ನಂಬಿಕೆಗೆ ಪಕ್ಕ ಆಚರಣೆಯ ಹಿನ್ನೆಲೆಯಲ್ಲಿ ಜಾತ್ರೆ ಪ್ರಮುಖ ಪಾತ್ರವಹಿಸುತ್ತದೆ. ಮೊಳಕಾಲ್ಮೂರು ಪರಿಸರದಲ್ಲಿ ಜರುಗಿದ ಜಾತ್ರೆಗಳನ್ನು ಸಂಕ್ಷಿಪ್ತವನ್ನು ವಿಶ್ಲೇಷಿಸಬಹುದಾಗಿದೆ.

ಶಿರೇಕೊಳದಲ್ಲಿ ನಡೆಯುವ ಉತ್ಸವವು ಎರಡನೇ ಮಂತ್ರಾಲಯವೆಂದೇ ಪ್ರಸಿದ್ಧ ಪಡೆದಿರುವ ಶ್ರೀ ರಾಘವೇಂದ್ರ ಸ್ವಾಮಿಗಳ ಮಠವಿದೆ. ೧೭೩೫ರಲ್ಲಿ ಇಲ್ಲಿನ ಶ್ಯಾನಭೋಗರಾದ ಹಿರೇಮದ್ದೂರಾಯರ ಅಕಳಂಕ ಪ್ರಾರ್ಥನೆಯ ಮೇರೆಗೆ ಸಾಕ್ಷತ್ ಶ್ರೀ ರಾಘವೇಂದ್ರ ಗುರುಗಳೇ ಇಲ್ಲಿಗೆ ದಯಮಾಡಿಸಿದ್ದು, ಶ್ರೀಯುತರ ಮನೆಯಲ್ಲಿ ನೆಲಸಿ, ಭಕ್ತರ ಕಂಟಕ ಪರಿಹಾರ ಮಾಡುತ್ತಿದ್ದರೆಂಬ ಪ್ರತೀತಿಯಿದೆ. ಈ ಮಠದಲ್ಲಿ ಶ್ರಾವಣ ಮಾಸದಲ್ಲಿ ಮೂರು ದಿನಗಳ ಕಾಲ ಸ್ವಾಮಿಯ ಆರಾಧನೆ ನಡೆಯುತ್ತದೆ. ಶ್ರೀರಾಮ ನವಮಿ ಭರತಖಂಡದಲ್ಲಿ ಆರ್ಯ ಸಂಸ್ಕೃತಿಗೆ ಸೇರಿದ ಎಲ್ಲಾ ಜನರು ಆತ್ಮೀಯತೆಯಿಂದ ಆಚರಿಸುವ ಹೆಗ್ಗಳಿಕೆಯ ಉತ್ಸವಗಳಲ್ಲಿ ಒಂದು. ಇತಂಹ ಉತ್ಸವಗಳು ಈ ಪರಿಸರದ ಚಿಕ್ಕೇರಹಳ್ಳಿ ಹಾಗೂ ಬೊಮ್ಮ ದೇವರ ಹಳ್ಳಿಗಳಲ್ಲಿ ತುಂಬಾ ವಿಜೃಂಭಣೆಯಿಂದ ಆಚರಿಸುತ್ತಾರೆ.

"ಉಂಡಿದ್ದೇ ಉಗಾದಿ, ಮಿಂದಿದ್ದೇ ದೀಪಾವಳಿ" ಎಂಬಂತೆ ತಾಲ್ಲೂಕಿನಾದ್ಯಂತ ಸಡಗರ ಸಂಭ್ರಮದಿಂದ ಆಚರಿಸುವ ವರ್ಷಾರಂಭದ ಯುಗಾದಿ ಹಬ್ಬವನ್ನು ಜಾತ್ರೆ ಹಾಗೂ ರಥೋತ್ಸವ ಎಳೆಯುವುದರ ಮೂಲಕ ಗೌರಸಮುದ್ರ ಹಾಗೂ ದೇವಸಮುದ್ರ ಗ್ರಾಮಗಳಲ್ಲಿ ಬಹು ಸೊಗಸಾಗಿ ಆಚರಿಸುತ್ತಾರೆ. ಕರ್ನಾಟಕದ ತಿರುಪತಿಯಂತೆ ಬೇಡರಿಗೆ ವರದಾನವಾದ ನೆಲೆ ಕಂಪಳ

ರಂಗಕ್ಷೇತ್ರ ದೇವರ ಜಾತ್ರೆಯಲ್ಲಿ ನಡೆಯುವ ಆಚರಣೆ, ದನಗಳ ಜಾತ್ರೆ, ವಿಶೇಷವಾಗಿ ಕಂಡುಬರುತ್ತದೆ. ಸಿಡಿ ಆಡುವುದು ಜಾತ್ರೆಯ ವಿಶಿಷ್ಟ ಆಚರಣೆ ನುಂಕೇಮಲೆ ಬೆಟ್ಟದಲ್ಲಿ ಸಿಡಿ ಆಡುವುದು ತಾಲ್ಲೂಕಿನಲ್ಲಿ ಪ್ರಸಿದ್ಧ ಪಡೆದ ಜಾತ್ರೆಯಾಗಿದೆ. ಹಾಗೂ ನಾಗಸಮುದ್ರದ ಗ್ರಾಮದಲ್ಲಿಯ ಮಾರಮ್ಮ ದೇವಿಯ ಸಿಡಿ ಜರುಗುತ್ತದೆ. ಕರಿಬಸವೇಶ್ವರ ಜಾತ್ರೆ, ಜಗೀರ ಬುಡ್ಡೇನಹಳ್ಳಿಯಲ್ಲಿ ಜರುಗುತ್ತದೆ. ಹಂಪಿ ಹುಣ್ಣಿಮೆಯ ದಿನ ರಾಂಪುರ ಗ್ರಾಮದಲ್ಲಿ ಪೇಟೆ ಬಸವೇಶ್ವರ ರಥೋತ್ಸವ ವಿಜೃಂಭಣೆಯಿಂದ ಜರುಗುವುದು. ಬಿಳಿನೀರು ಚಿಲುಮೆ ಸ್ಥಳದಲ್ಲಿ ತಿಪ್ಪೇರುದ್ರಸ್ವಾಮಿಯ ರಥೋತ್ಸವವನ್ನು ಕಾರ್ತಿಕ ಮಾಸದಲ್ಲಿ ಉತ್ಸವ ಆಚರಿಸುತ್ತಾರೆ. ತಾಲ್ಲೂಕಿನಾದ್ಯಂತ ಹಿಂದೂ ಮುಸ್ಲಿಂ ಎಂಬ ಬೇಧವಿಲ್ಲದೆ ಸಾಮರಸ್ಯ, ಭಾವೈಕ್ಯತೆಯ ಪ್ರತೀಕವೆಂಬಂತೆ ಮೊಹರಂ ಹಬ್ಬವನ್ನು ತುಂಬಾ ಆನಂದದಿಂದ ಕುಣಿದು ಕುಪ್ಪಳಿಸಿ ಆಚರಿಸುತ್ತಾರೆ.

### ೩.೧೫. ಮೊಳಕಾಲ್ಮೂರು ಪರಿಸರದ ಪ್ರೇಕ್ಷಣೀಯ ಸ್ಥಳಗಳು

ಮೊಳಕಾಲ್ಮೂರು ಪ್ರದೇಶವು ಐತಿಹಾಸಿಕ ಮಹತ್ವ ಪಡೆದ ತಾಲ್ಲೂಕಾಗಿದೆ. ದಕ್ಷಿಣ ಭಾರತದಲ್ಲಿ ಅಶೋಕನ ಶಿಲಾಶಾಸನಗಳಿಂದ ಪ್ರಸಿದ್ಧ ಪಡೆದಿದೆ. ಈ ಪರಿಸರದಲ್ಲಿ ಅನೇಕ ಸಾಂಸ್ಕೃತಿಕ ಹಾಗೂ ಪ್ರೇಕ್ಷಣಿಯ ಸ್ಥಳಗಳಿರುವುದು ವಿಶಿಷ್ಟ ಸಂಗತಿ. ಕನ್ನಡದ ಶಾಸನೋಕ್ತ ಪ್ರಥಮ ಗ್ರಾಮವಾದ 'ಇಸಿಲ'ವು ಮೊಳಕಾಲ್ಮೂರು ಪ್ರದೇಶದಲ್ಲಿರುವುದು ಹೆಮ್ಮೆಯ ಸಂಗತಿ. ತಾಲ್ಲೂಕಿನ ಹೆಗ್ಗಳಿಕೆ ಅಲ್ಲದೆ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಪ್ರಸ್ತಾಪಿಸಿದ 'ಇಸಿಲ' ಸುವರ್ಣಗಿರಿ ಪ್ರದೇಶಗಳು ಮೊಳಕಾಲ್ಮೂರು ಪರಿಸರದಲ್ಲಿವೆ. ಬಂಡೆಗಲ್ಲಿನ ಅಶೋಕನ ಶಾಸನ ಹಾಗೂ ಬ್ರಹ್ಮಗಿರಿಯ ಅನೇಕ ಪ್ರವಾಸಿಗರನ್ನು ಕೈ ಬೀಸಿ ಕರೆದು ಚರಿತ್ರೆಯನ್ನು ಸಾರುತ್ತದೆ. ಅಲ್ಲದೆ ಸಾಂಸ್ಕೃತಿಕ ವೈಭವವನ್ನು ಸಾರುವ ಪೌರಾಣಿಕ ಕಥೆಯನ್ನು ಕಣ್ಮುಂದೆ ಕಟ್ಟಿಕೊಡುವ ಜಟಂಗಿ ರಾಮೇಶ್ವರ ಬೆಟ್ಟವು ಶ್ರೀರಾಮನು ಜಟಾಯುವಿಗೆ ಅಗ್ನಿ ಸಂಸ್ಕಾರ ಮಾಡಿದ ಪುಣ್ಯಕ್ಷೇತ್ರವಾಗಿ ಐತಿಹಾಸಿಕ ಮಹತ್ವ ಪಡೆದಿದೆ. ಕದಂಬರ ಮಯೂರವರ್ಮ ನಿರ್ಮಿಸಿರುವ ಶ್ರೀ ನುಂಕೆಮಲೆ ಭೈರವನ ಬೆಟ್ಟದ 'ಲುಂಕೆ ಕೋಟೆ' ಇಲ್ಲಿ ನಡೆಯುವ ಸಿಡಿ ಉತ್ಸವಕ್ಕೆ ರಾಜ್ಯದ ಮೂಲೆಗಳಿಂದ ಸಹಸ್ರಾರು ಜನರು ಆಗಮಿಸುವ ಕ್ಷೇತ್ರವಾಗಿದೆ. ಜೋಗಪ್ಪಗುಡ್ಡ ಇದನ್ನು 'ಕದಂಬಗುಡ್ಡ' ಎಂತಲೂ ಕೂಗುಬಂಡೆ ಕಲ್ಲು ಎಂತಲೂ ನಾಮಕರಣಗೊಂಡು ಮೊಳಕಾಲ್ಮೂರು ಪ್ರದೇಶದಲ್ಲಿ ಐತಿಹಾಸಿಕ ಮಹತ್ವ ಪಡೆದಿದೆ. ಸಂತೇಗುಡ್ಡ ಕೋಟೆಯು ಪಾಳೆಗಾರರ ಗಡಿರಕ್ಷಣಾ ಕೋಟೆಯಾಗಿ ಪ್ರಸಿದ್ಧಿಯಾಗಿದೆ. ರೇಷ್ಮೆ ಸೀರೆ ತಯಾರಿಕೆಯಲ್ಲಿ ಮೊಳಕಾಲ್ಮೂರು ರಾಜ್ಯದಲ್ಲಿಯೇ ಹೆಸರನ್ನು ಪಡೆದುಕೊಂಡಿದೆ. ಶಿರೇ ಕೊಳದ ರಾಘವೇಂದ್ರ ಸ್ವಾಮಿಗಳ ಮಠ, ದೇವಸಮುದ್ರದ ಪರಮೇಶ್ವರ ಸ್ವಾಮಿ ಮಠ, ಕಂಪಳರಂಗ ಕ್ಷೇತ್ರ ಹೀಗೆ ಧಾರ್ಮಿಕವಾಗಿ ಮಹತ್ವ ಪಡೆದ ಸ್ಥಳಗಳಾಗಿವೆ. ಕಾಡುಸಿದ್ಧಾಪುರದಲ್ಲಿನ ಶವಸಂಸ್ಕಾರ ಪದ್ಧತಿ, ಕೋನಸಾಗರದ ಬಳಿ ಇರುವ ಬಿಳಿನೀರು ಚಿಲುಮೆ, ಬ್ರಹ್ಮಗಿರಿ ತಪ್ಪಲಲ್ಲಿರುವ ರೊಪ್ಪ ಗ್ರಾಮದ ಮೌರ್ಯರ ಮನೆಗಳು ಪೂರ್ವಿಕರ ಸಮಾಧಿಗಳು, ಬಾಂಡ್ರಾವಿ ಅರಣ್ಯ ಪ್ರದೇಶ, ಸಂತೇಗುಡ್ಡದ ಪಾಳೆಗಾರರ ಸಂಸ್ಕೃತಿಯ ತಾಣಗಳು

ತಾಲ್ಲೂಕಿನಲ್ಲಿ ಹಾವಿನೋಪಾದಿಯಲ್ಲಿ ಹರಿಯುವ ಹಗರಿ, ಚಿನ್ನಹಗರಿ, ಹನೆಯನದಿ ಎಂದು ನಾನಾ ಹೆಸರುಗಳಿಂದ ಪ್ರಸಿದ್ಧಿ ಪಡೆದಿದೆ. ಅಶೋಕನ ಶಿಲಾಶಾಸನಗಳು, ಬ್ರಹ್ಮಗಿರಿ, ಜಟಂಗಿ ರಾಮೇಶ್ವರದಲ್ಲಿರುವ ದೇವಾಲಯಗಳು ಸಾಂಸ್ಕೃತಿಕ ಸಂದೇಶವನ್ನು ಸಾರುತ್ತವೆ. ಹೀಗೆ ಮೊಳಕಾಲ್ಮೂರು ಪರಿಸರವು ಐತಿಹಾಸಿಕವಾಗಿ, ಸಾಂಸ್ಕೃತಿಕ ಪ್ರೇಕ್ಷಣೀಯ ಸ್ಥಳಗಳು ಒಳಗೊಂಡಿರುವುದನ್ನು ಕಾಣುತ್ತೇವೆ. ಈ ತಾಲ್ಲೂಕಿಗೆ ಸಂಬಂಧಪಟ್ಟಂತೆ ಒಟ್ಟು ೪೬ ಶಾಸನಗಳು ದೊರೆತಿದ್ದು, ತಾಲ್ಲೂಕಿನಲ್ಲಿ ಬೌದ್ಧ, ಜೈನ, ಶೈವ, ವೈಷ್ಣವ, ಧಾರ್ಮಿಕತೆಯನ್ನು ಎತ್ತಿ ತೋರಿಸುತ್ತದೆ. ಅಲ್ಲದೆ ಪ್ರಾಚೀನ ಪುರಾತತ್ವ ಪರಿಸರವನ್ನು ನೆನಪಿಗೆ ತಂದುಕೊಡಬಲ್ಲದು.

### ಅಡಿಟಿಪ್ಪಣಿ

೧. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ–೩. ಸಂ. ಸೂರ್ಯನಾಥ, ಯು. ಕಾಮತ್, ಪು–೫೮೧.

೨. ಮೊಳಕಾಲ್ಮೂರು ತಾಲ್ಲೂಕು ದರ್ಶನ, ಕೆ.ಎನ್. ಭೀಮಾರೆಡ್ಡಿ, ಪು–೧೪.

೩. ಚಿತ್ರದುರ್ಗ ಜಿಲ್ಲಾ ದರ್ಶಿನಿ, ಟಿ. ಗಿರಿಜ, ಪು–೨೪೩.

೪. ಮೊಳಕಾಲ್ಮೂರು ತಾಲ್ಲೂಕು ದರ್ಶನ, ಕೆ.ಎನ್. ಭೀಮಾರೆಡ್ಡಿ, ಪುಟ–೬೬

೫. ಅದೇ ಪುಟ–೧೩

೬. ಎಫಿಗ್ರಾಫಿ ಕರ್ನಾಟಕ, ಸಂ–೧೧, ಮೊಳಕಾಲ್ಮೂರು ಶಾ.ಸಂ–೩೭.

೭. ಮೊಳಕಾಲ್ಮೂರು ತಾಲ್ಲೂಕು ದರ್ಶನ, ಕೆ.ಎನ್. ಭೀಮಾರೆಡ್ಡಿ, ಪುಟ–೧೫

೮. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು, ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ., ಸಂ. ಪುಟ–೪೬೬.

೯. ನುಂಕೇಮಲೆ ಭೈರವಾರಾಧನೆ ಹೊಳಹು, ಸಿದ್ದಣ್ಣ ಎಂ.ಫಿಲ್. ಅಪ್ರಕಟಿತ ನಿಬಂಧ, ಪುಟ–೨

೧೦. ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಡಾ. ವಿರೂಪಾಕ್ಷಿ ಪೂಜಾರಹಳ್ಳಿ, ಪುಟ–೯.

೧೧. ಅದೇ ಪುಟ–೫೨.

೧೨. ದುರ್ಗಸಿರಿ, ಸ್ಮರಣ ಸಂಚಿಕೆ, ದುರ್ಗೋತ್ಸವ, ಪುಟ–೯೮.

೧೩. ಮೊಳಕಾಲ್ಮೂರು ತಾಲ್ಲೂಕಿನ ಪುರಾತತ್ವೀಯ ಪರಿಸರ, ಯು. ಜಯಣ್ಣ, ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೧೮೯.

೧೪. ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು, ಎಂ. ಚಿದಾನಂದಮೂರ್ತಿ, ಪುಟ-೭.

೧೫. ಮೊಳಕಾಲ್ಮೂರು ತಾಲ್ಲೂಕಿನ ಪುರಾತತ್ವೀಯ ಪರಿಸರ, ಯು. ಜಯಣ್ಣ, ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೨೧೦.

೧೬. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೩. ಸಂ. ಸೂರ್ಯನಾಥ, ಯು. ಕಾಮತ್, ಪು-೫೮೧.

೧೭. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು, ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ., ಸಂ. ಪುಟ-೩೪೯.

೧೮. ಎಫಿಗ್ರಾಫಿ ಕರ್ನಾಟಕ, ಸಂ-೧೧, ಮೊಳಕಾಲ್ಮೂರು, ಪುಟ-೨೮.



# ಅಧ್ಯಾಯ : ನಾಲ್ಕು

## ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು

೪.೧. ಶಾಸನೋಕ್ತ ಸ್ಥಳನಾಮಗಳ ವರ್ಗೀಕರಣ
೪.೧.೧. ಪ್ರಾಕೃತಿಕ ಸ್ಥಳನಾಮಗಳು
೪.೧.೨. ಸಾಂಸ್ಕೃತಿಕ ಸ್ಥಳನಾಮಗಳು
೪.೨. ಶಾಸನೋಕ್ತ ಸ್ಥಳನಾಮಗಳ ಪಟ್ಟಿ
೪.೩. ಶಾಸನೋಕ್ತ ಸ್ಥಳನಾಮಗಳ ಪ್ರಾಚೀನ ಮತ್ತ ಪ್ರಸ್ತುತ ರೂಪಗಳು

# ಅಧ್ಯಾಯ: ನಾಲ್ಕು

## ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು

ಸೃಷ್ಟಿಯ ಪ್ರತಿಯೊಂದು ಪದಾರ್ಥಕ್ಕೂ ಒಂದು ಹಿನ್ನೆಲೆ, ಇತಿಹಾಸವಿರುತ್ತದೆ. ಪ್ರತಿಯೊಬ್ಬ ವ್ಯಕ್ತಿಗೂ, ಪ್ರತಿಯೊಂದು ಊರಿಗೂ ಚರಿತ್ರೆಯಿರುತ್ತದೆ. "ವ್ಯಕ್ತಿಯ ಹೆಸರು, ಊರಿನ ಹೆಸರು ಬರಿ ಹೆಸರುಗಳಲ್ಲ, ಆ ಹೆಸರುಗಳ ಊರಿನಲ್ಲಿ ಬಸಿರಲ್ಲಿ ಆತ್ಮ ಚರಿತ್ರೆ ಇರುತ್ತದೆ."[೧] ಅಂತಹ ಆತ್ಮ ಚರಿತ್ರೆಯನ್ನು ಸಂಗ್ರಹಿಸುವಲ್ಲಿ ಶಾಸನಗಳಿಗೆ ಮಹತ್ವವಿದೆ. "ಶಾಸನಗಳು ಐತಿಹಾಸಿಕ ದಾಖಲೆಗಳಷ್ಟೇ ಅಲ್ಲ, ಸ್ಥಳನಾಮಗಳ ಕೋಶಗಳೂ ಅಹುದು."[೨] ಸ್ಥಳನಾಮಗಳು ಶಾಸನಗಳಿಂದ ಸಾವಿರಾರು ವರ್ಷದ ಪೂರ್ವದ ಇತಿಹಾಸವನ್ನು ಕಟ್ಟಿಕೊಡುತ್ತವೆ. ಇಂತಹ ಸ್ಥಳನಾಮಗಳ ಸಂಪೂರ್ಣ ಮಾಹಿತಿಯ ನಂತರದ ತಲೆಮಾರುವರೆಗಿನ ಇಲ್ಲದೇ ಹೋಯಿತು. ಇದಕ್ಕೆ ಕಾರಣ ಅವರು ಈ ಕಡೆ ಗಮನ ಹರಿಸದೇ ಹೋದದ್ದು. ನಂತರ ತಮ್ಮ ವಾಸದ ನೆಲೆಯ ಹೆಸರುಗಳ ಕುರಿತಾದ ಜ್ಞಾನ ಮೂಡಿದಾಗಿನಿಂದ ಅಧಿಕೃತವಾಗಿ ಅವರವರ ಹಟ್ಟಿ, ಗ್ರಾಮ, ಊರು, ಪಟ್ಟಣ, ನಗರಗಳ ಚರಿತ್ರೆಯೂ ವಿಕಸನ ಹೊಂದುತ್ತಾ ಬಂದುದು ನಮ್ಮೆದುರಿಗಿರುವ ಸತ್ಯ. ಇದು ಆರಂಭವಾದ ತದನಂತರದಲ್ಲಿ ಪ್ರಭುತ್ವದ ಚೌಕಟ್ಟಿನೊಳಗೆ ಬದುಕನ್ನು ನಿರ್ಮಿಸಿಕೊಂಡ ಜನತೆಯ ಇತಿಹಾಸ ಸ್ಪಷ್ಟ ದಾಖಲೆಗಳ ಕಡೆ ಗಮನಹರಿಸಿದರು. ರಾಜ, ಸಾಮಂತ, ಮಂತ್ರಿ, ವಿಶೇಷವೆನಿಸಬಹುದಾದ ಅಥವಾ ಆಜ್ಞೆಯ ರೂಪದ ಕುರುಹಿನ ಸವಿನೆನಪಿನ ಸಲುವಾಗಿ ಶಾಸನ, ಕಾವ್ಯಾದಿಗಳಲ್ಲಿ ಚರಿತ್ರೆಯನ್ನು ಕಟ್ಟುವ ಪ್ರಯತ್ನ ಮಾಡಿದರು. ಇಲ್ಲಿಂದಲೇ ಸ್ಥಳನಾಮಗಳು ಅಧಿಕೃತ ದಾಖಲಾತಿಯು ಆರಂಭವಾಯಿತು. ಈ ಮುಂಚೆ ಮೌಖಿಕ ಪರಂಪರೆಯಲ್ಲಿ ಗರ್ಭೀಕರಿಸಿಕೊಂಡಿದ್ದ ಹೆಸರುಗಳು, ಕಾಲಕ್ರಮದಲ್ಲಿ ನಾಶವಾಗುವ ಹಂತದಿಂದ ಬರವಣಿಗೆಯಲ್ಲಿ ರಕ್ಷಿಸುವ ಕೆಲಮಟ್ಟಿನ ಕೆಲಸ ಆರಂಭವಾಯಿತು. ಈ ಕಾರಣದಿಂದಲೇ ಶಾಸನ ಮತ್ತು ಸ್ಥಳನಾಮಗಳಿಗೆ ಅವಿನಾಭಾವ ಸಂಬಂಧವಿದೆ ಎಂದು ತಿಳಿಯಬಹುದು.

ಭೂತಕಾಲದ ದಾಖಲೆಗಳಾಗಿ ಉಳಿದ ಶಾಸನಗಳಲ್ಲಿ ಉಕ್ತವಾದ ಸ್ಥಳನಾಮಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ. ಮುಖ್ಯವಾಗಿ ಇಲ್ಲಿ ಶಾಸನೋಕ್ತ ಸ್ಥಳನಾಮಗಳ ಪಟ್ಟಿಯಲ್ಲಿ ರಾಯದುರ್ಗ,

ಕಣೇಕಲ್ಲು, ಬೆಣಕಲ್ಲು, ಬಂಡೂರು, ಈ ಸ್ಥಳಗಳು ಈಗಿನ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲ್ಲೂಕಿಗೆ ಒಳಪಟ್ಟಿವೆ. ಶಾಸನೋಕ್ತ ಸ್ಥಳನಾಮಗಳ ಪಟ್ಟಿ ಈ ಕೆಳಗಿನಂತೆ ಗಮನಿಸಬಹುದಾಗಿದೆ.

## ೪.೧. ಶಾಸನೋಕ್ತ ಸ್ಥಳನಾಮಗಳ ವರ್ಗೀಕರಣ

ಸ್ಥಳನಾಮಗಳಲ್ಲಿ ಕಂಡುಬರುವ ನಿರ್ದಿಷ್ಟ ಘಟಕಗಳನ್ನು ಒಂದೆಡೆ ಕಲೆಹಾಕುವುದು ಕಷ್ಟ. ಸ್ಥಳಗಳಿಗೆ ಹೆಸರಿಡುವ ಪ್ರಕ್ರಿಯೆಯು ಇತಿಹಾಸಗಳನ್ನು ಗಮನಿಸಿದಾಗ ಸಾಮಾನ್ಯವಾಗಿ ಪ್ರಕೃತಿವಾಚಿ ಮೊದಲು, ಅನಂತರ ಜನಾಂಗವಾಚಿ, ವ್ಯಕ್ತಿವಾಚಿಗಳು ಬರುತ್ತವೆ.

"ಗ್ರಾಮಗಳಿಗೆ ಮೊದಲು ಪ್ರಕೃತಿನಾಮ (ನವಿಲಗುಂದ) ಆ ಮೇಲೆ ಜನಾಂಗನಾಮ (ಹಂದರಾಳು) ತದನಂತರದಲ್ಲಿ ವ್ಯಕ್ತಿನಾಮಗಳನ್ನು ಇಡುತ್ತಾ ಬರಲಾಗಿದೆ ಎಂದು ತಿಳಿದುಬಂದಿರುವುದರಿಂದ ಜನಾಂಗ ನಾಮವಿಡುತ್ತಿದ್ದ, ಕಾಲಘಟ್ಟದಲ್ಲಿ ಹುಟ್ಟಿದ ಧಾರವಾಡ ತಕ್ಕಮಟ್ಟಿಗೆ ಹಳೆಯದೆಂದೇ ಹೇಳಬೇಕು."[೩] ಆದರೆ ವಾರ್ಗಿಕ ಆಕೃತಿಮಗಳ ಸಂಖ್ಯೆ ಸೀಮಿತವಾಗಿರುವುದರಿಂದ ಅವುಗಳನ್ನು ಒಂದೆಡೆ ಸಂಗ್ರಹಿಸುವುದು ಸುಲಭ ಸಾಧ್ಯ. ಸ್ಥಳನಾಮಗಳ ಘಟಕಗಳನ್ನು ಪ್ರತ್ಯೇಕಿಸಿ ಅವುಗಳ ಸ್ವರೂಪವನ್ನು ಖಚಿತಪಡಿಸಿ, ಅರ್ಥಗ್ರಹಿಕೆಯೊಡನೆ ಆ ಸ್ಥಳನಾಮ ಬರಲು ಆಧಾರಗಳೊಡನೆ ಒಂದು ನಿರ್ಧಾರಕ್ಕೆ ಬರುವುದಾದರೆ ಇಲ್ಲಿ ನಿಷ್ಪತ್ತಿಯಂತಹ ಪ್ರಮುಖ ಘಟ್ಟವನ್ನು ತಲುಪಿದಂತಾಗುತ್ತದೆ.

ಮೊಳಕಾಲ್ಮೂರು ತಾಲ್ಲೂಕುಗಳ ಶಾಸನೋಕ್ತ ಸ್ಥಳನಾಮಗಳ ವಾರ್ಗಿಕಗಳನ್ನು ಪರಿಶೀಲನೆಗೆ ಒಳಪಡಿಸಿ, ಕೆಳಗಿನಂತೆ ವರ್ಗೀಕರಿಸಿ ವಿಶ್ಲೇಷಿಸಲಾಗಿದೆ.

| ಪ್ರಾಕೃತಿಕ ಸ್ಥಳನಾಮಗಳು | ಸಾಂಸ್ಕೃತಿಕ ಸ್ಥಳನಾಮಗಳು | ಸಂಕೀರ್ಣ ಸ್ಥಳನಾಮಗಳು |
|---|---|---|
| ಜಲವಾಚಿ | ಪ್ರಾಣಿವಾಚಿ | |
| ಸಸ್ಯ, ಗಿಡ, ಮರ ಇತ್ಯಾದಿ | ವ್ಯಕ್ತಿವಾಚಿ | |
| ಶಿಲಾವಾಚಿ | ವಲಸೆ | |
| ಲೋಹ, ಖನಿಜ | ಆಹಾರ | |
| ದಿಕ್ಕು, ದೆಸೆ | ದೈವವಾಚಿ | |
| ಪರಿಮಾಮವಾಚಕ | ವ್ಯಾಪಾರ | |
| | ಕೋಟೆ, ಸೈನಿಕ, ಕೇಂದ್ರ | |
| | ವೃತ್ತಿ, ಜಾತಿ | |

### ೪.೧.೧. ಪ್ರಾಕೃತಿಕ ಸ್ಥಳನಾಮಗಳು

### ೧. ಜಲವಾಚಿ ಸ್ಥಳನಾಮಗಳು

"ಮಾನವನ ಸಂಸ್ಕೃತಿಯು ವಿಕಾಸದ ಹಂತದಲ್ಲಿ ಜಲಕ್ಕೆ ಅತಿ ಮುಖ್ಯ ಸ್ಥಾನವಿದೆ. ಬಹುತೇಕ ಜಗತ್ತಿನ ನಾಗರಿಕತೆಗಳೆಲ್ಲವೂ ನದಿ ದಂಡೆಯ ಮೇಲೆ ಜೀವನವನ್ನು ಆರಂಭಿಸಿದವೆಂದು ತಿಳಿಯುತ್ತದೆ. ಸದಾ ಸಂಚಾರಿಯಾಗಿದ್ದ ಮಾನವನು ಒಂದೆಡೆ ತನ್ನ ಅಸ್ತಿತ್ವವನ್ನು ಕಂಡುಕೊಂಡನು. ಆಗ 'ಜಲ' ಮುಖ್ಯವಾಗಿ ಬೇರೆ ಇತ್ತು. ಈ ಕಾರಣಗಳಿಂದ ಕಾಡನ್ನು ತೊರೆದು ನೀರಿನ ಸಮೀಪ ತಮ್ಮ ನೆಲೆಗಳನ್ನು ಕಟ್ಟಿಕೊಂಡರು. ಅಥವಾ ಸಹಜವಾಗಿ ಹರಿಯುವ ನೀರಿಗೆ ಕೆರೆ, ಕುಂಟೆ, ಕೊಳಗಳಂತಹ ಕೃತಕ ಜಲ ಸಂಗ್ರಹಗಳನ್ನು ನಿರ್ಮಿಸಿಕೊಂಡನು."[೪] ಇಂದಿಗೂ ಗ್ರಾಮಗಳ ನಿರ್ಮಾಣ ನೀರನ್ನು ಅವಲಂಬಿಸಿ ರಚನೆಯಾಗುತ್ತದೆ. ಹೀಗೆ ಜಲ ಮೂಲ ಸಂಸ್ಕೃತಿಯಿಂದ ಆರಂಭವಾದ ಸಂಸ್ಕೃತಿಯಲ್ಲಿ ಆ ಜಲವನ್ನು ಅವಲಂಬಿಸಿಯೇ ಕೆಲವು ಗ್ರಾಮಗಳಿಗೆ ಹೆಸರು ಕರೆದುಕೊಳ್ಳುವ ರೂಢಿ ಆರಂಭವಾಗಿರಬೇಕು. ಅಂತಹ ಭೂಸ್ಥಿತಿಯನ್ನು ಹೇಳುವ ಸ್ಥಳನಾಮಗಳು ಹೇರಳವಾಗಿ ದೊರೆಯುತ್ತವೆ. 

ಜಲವಾಚಿ ಸ್ಥಳನಾಮಕ್ಕೆ ಉದಾಹರಣೆಗಳು ಕೋನಸಾಗರ, ದೇವಸಮುದ್ರ, ನಾಗಸಮುದ್ರ.

ಕೆರೆ, ಕೊಳ ಎಂಬ ಜಲವಾಚಿ ವಾರ್ಗಿಕಗಳು ಈ ಭಾಗದಲ್ಲಿ ಬಳಕೆಯಾಗಿವೆ. ಮೊಳಕಾಲ್ಮೂರು ತಾಲ್ಲೂಕಿನ ಪರಿಸರದಲ್ಲಿ ಸಮುದ್ರ, ಸಾಗರಗಳೆಂಬಂತಹ ಜಲಮೂಲ ಉತ್ತರ ಪದಗಳಾಗಿ ಸ್ಥಳನಾಮಗಳಲ್ಲಿ ಬಳಕೆಯಾಗಿರುವುದು ವಿಶೇಷವಾಗಿ ತೋರುತ್ತದೆ. ಕೆರೆ, ಕುಂಟೆಯಂತಹ ಸಂಗ್ರಾಹಕಗಳಿಗೆ ತಮ್ಮ ಕಲ್ಪನೆಯಲ್ಲಿ ಸಮುದ್ರ, ಸಾಗರವೆಂದು ಕರೆದುಕೊಂಡಿರಬೇಕು. ಜಲವಾಚಿ ಸ್ಥಳನಾಮಗಳಲ್ಲಿ ಬಳಕೆಯಾಗುವ ಕೆರೆ>ಗೆರೆ, ಕೇರಿ>ಗೇರಿ ಎಂದು ಭಾವಿಸಲಾಗುತ್ತದೆ.

"ಅಚ್ಚ ದ್ರಾವಿಡ ವಾರ್ಗಿಕವಿದು. ದ್ರಾವಿಡ ಭಾಷೆಗಳಲೆಲ್ಲಾ ಬಳಕೆಯಲ್ಲಿದ್ದು, ಅವರ ಜ್ಞಾತಿ ಶಬ್ದಗಳ ಹೀಗಿವೆ"[೫] ಎಂದು ವಿಶ್ವನಾಥಯ್ಯ ಅವರು ಹೇಳುತ್ತಾರೆ.

ತಮಿಳು : ಮಲೆಯಾಳಂ : ಚೇರಿ

ಕನ್ನಡ : ಕೇರಿ, ಗೇರಿ

ತೆಲುಗು : ಗೇರಿ

ತುಳು : ಕೇರಿ

ಈ ವಾರ್ಗಿಕವು ಊರು, ಊರಿನ ಭಾಗ ಎಂಬ ಅರ್ಥವನ್ನು ಕೊಡುತ್ತದೆ. "ಕೇರಿಯು ಜಲರಾಶಿಯನ್ನು ಸೂಚಿಸುವ ಮುಕ್ತ ಆಕೃತಿಮಾ ಕೆರೆಯಿಂದ ಬಂದಿರಬೇಕೆಂದು ಆರ್.ಸಿ. ಹಿರೇಮಠ ಹೇಳುತ್ತಾರೆ."[೬] ಜಲವನ್ನು ಸೂಚಿಸುವ ಪದಗಳು ಹೆಚ್ಚಾಗಿ ಸ್ಥಳನಾಮಗಳ ಉತ್ತರ ಭಾಗದಲ್ಲಿ ಕಂಡುಬಂದಿವೆ. ಪೂರ್ವಪದವಾಗಿ ವಿರಳವಾಗಿ ತೋರುತ್ತವೆ.

## ೨. ಶಿಲಾವಾಚಿ ಸ್ಥಳನಾಮಗಳು

ಸ್ಥಳನಾಮ ನಿರ್ದೇಶನದಲ್ಲಿ ಹೆಚ್ಚಾಗಿ ಪ್ರಕೃತಿಯನ್ನೇ ಅವಲಂಬಿಸಿದ ಪ್ರಾಚೀನರು ಕಲ್ಲನ್ನು ಅತಿಯಾಗಿ ಗಮನದಲ್ಲಿಟ್ಟುಕೊಂಡಿದ್ದಾರೆಂಬುದು ಸ್ಥಳನಾಮಗಳ ಅವಲೋಕನದಿಂದ ತಿಳಿದುಬರುತ್ತದೆ. ಅರೆ, ಕಲ್ಲು, ಕೋರೆ, ಬಂಡೆಗಳು ವಾರ್ಗಿಕಗಳಾಗಿ ಕೂಡ ಶಿಲಾವಾಚಿ ಸ್ಥಳನಾಮಗಳು ರೂಪಿತವಾಗಿವೆ ಎಂಬುದನ್ನು ಗುರುತಿಸಬಹುದು. ಕಲ್ಲನ್ನು ಪ್ರೀತಿಸುವ, ಪೂಜಿಸುವ ನಮ್ಮ ಪ್ರಾಚೀನ ಜನರು ಕಲ್ಲು, ಶಿಲೆಗಳಿಗೆ ಮಹತ್ವವಾದ ಸ್ಥಾನವನ್ನು ಕೊಟ್ಟಿದ್ದಾರೆ.

ಕುಂದ – ಗುಂದ– ಗೊಂದಿ "ಇದು ದ್ರಾವಿಡ ಮೂಲದಿಂದ ಬಂದ ವಾರ್ಗಿಕ, ಇತರೆ ದ್ರಾವಿಡ ಭಾಷೆಗಳಲ್ಲಿ ಸಂವಾದಿ ರೂಪಗಳು ಕೆಳಕಂಡಂತಿವೆ.

ತಮಿಳು : ಕುನಂ

ಕನ್ನಡ : ಕೊಂಡೆ

ತೆಲುಗು : ಕೊಂಡೆ

ಮಲೆಯಾಳಂ : ಕುನ್ಸಮ್

ತುಳು : ಗಡ್ಡೆ

ಈ ಎಲ್ಲಾ ಜ್ಞಾತಿ ಭಾಷೆಗಳಲ್ಲಿ ಇದು ಎತ್ತರವಾದ ಸ್ಥಳ, ಗುಡ್ಡ, ಬೆಟ್ಟ ಮುಂತಾದ ಅರ್ಥಗಳನ್ನು ಕೊಡುತ್ತದೆ."[೨] ಬೆಟ್ಟಗಳ, ಗುಡ್ಡಗಳ ಸಮೀಪ ಬೆಳೆದ ಊರುಗಳನ್ನು ಸೂಚಿಸಲು ಈ ವಾರ್ಗಿಕ ಬಳಕೆಯಾಗಿದೆ. ಈಚೆಗೆ ಹಳ್ಳಿ ಎಂದರ್ಥವನ್ನಷ್ಟೇ ಕೊಡುತ್ತದೆ.

ಸ್ಥಳನಾಮಗಳಿಗೆ ಉದಾ: ಗುಡ್ಡದ ಹಳ್ಳಿ, ಬಂಡೆ ತಿಮ್ಮಲಾಪುರ

ಬೆಟ್ಟ, ಕಲ್ಲು, ಗುಡ್ಡ, ಕುಂದ ಎಂಬ ಶಿಲಾವಾಚಿ ಪದಗಳಿಂದ ಸ್ಥಳನಾಮಗಳು ಈ ಪರಿಸರಕ್ಕೆ ಕಾರಣವಾಗಿದೆಯೆಂದು ಈ ಮೇಲ್ನೋಟಕ್ಕೆ ತಿಳಿಯುತ್ತದೆ. ಶಿಲಾವಾಚಿ ಸ್ಥಳನಾಮಗಳು ಹೆಚ್ಚಾಗಿ ಉತ್ತರ ಪದದಲ್ಲಿ ಸೂಚಿತಗಳಾಗಿವೆ. ಅತಿ ವಿರಳವಾಗಿ ಅಲ್ಲೊಂದು ಇಲ್ಲೊಂದರಂತೆ ಪೂರ್ವ ಪದದಲ್ಲಿಯೂ ಇರುವುದು ಕಂಡುಬರುತ್ತದೆ. ಕಲ್>ಗಲ್, ಕೋಡು>ಗೋಡು ಎಂಬ ಈ ವಾರ್ಗಿಕಗಳಿಂದ ಕೊನೆಗೊಳ್ಳುವ ಸ್ಥಳಗಳು ಬಹು ಪ್ರಾಚೀನವಾದವು. ಶಿಲಾಯುಗದ ಮಾನವನ ನಿವಾಸ ಸ್ಥಳವನ್ನು ನಿರ್ದೇಶಿಸುತ್ತವೆ. ನಿಸರ್ಗವಾಚಿ ವಾರ್ಗಿಕವಾದ ಇದು ಕಲ್ಲು, ಬಂಡೆಗಳಿರುವ ಪ್ರದೇಶ ಎಂಬ ಅರ್ಥವನ್ನು ಕೊಡುತ್ತದೆ.

## ೩. ವರ್ಣಸೂಚಕ ಸ್ಥಳನಾಮಗಳು

ಕಪ್ಪು ಬಗೆಯ ಈ ಭಾಗದ ಸ್ಥಳನಾಮಗಳಿಂದ ಭೌಗೋಳಿಕ ಚಹರೆಯನ್ನು ಗುರುತಿಸುವ ಕಪ್ಪಾದ ಭೂಮಿ ಮತ್ತು ಕಪ್ಪು ಜನರನ್ನು ಸೂಚಿಸುವ ಸಲುವಾಗಿ ಈ ಹೆಸರುಗಳು ಬಂದಿವೆ.

## ೪. ಸಸ್ಯವಾಚಕ ಸ್ಥಳನಾಮಗಳು

ಮಾನವನಿಗೂ ಪ್ರಕೃತಿಗೂ ಅವಿನಾಭಾವ ಸಂಬಂಧವಿದೆ. ಇಂತಹ ಸಂಬಂಧದಿಂದ ಅವನ ಜೀವನವು ಸುಖಮಯವಾಗಿ ನಡೆಯಲು ಸಾಧ್ಯವಾಗಿದೆ. ಶುದ್ಧ ಗಾಳಿ, ನೆರಳು, ಸಸ್ಯವಾಚಕಗಳಿಂದ ದೊರೆಯುತ್ತದೆ. ಇಷ್ಟೇ ಅಲ್ಲದೆ ಒಂದೊಂದು ಜನಾಂಗ, ಪಂಗಡ, ರಾಜಮನೆತನಗಳ ಮೂಲಪುರುಷ ಒಂದೊಂದು ಮರದಲ್ಲಿ ಹುಟ್ಟಿಬಂದನೆಂಬ ಭಾವನೆಯ ಇತಿಹಾಸ ಕಾಲದಲ್ಲಿ ಇದ್ದುದರಿಂದ ಆಯಾ ಜನಾಂಗಗಳು ತಮಗೆ ಸಂಬಂಧಿಸಿದ ವೃಕ್ಷಗಳು ಗಿಡಗಳನ್ನು ಆರಾಧನೆ ಮಾಡತೊಡಗಿದವು. ಹಾಗೆಯೇ ಆ ಪರಿಸರದಲ್ಲಿ ಸಾಮಾನ್ಯವಾಗಿ ಬೆಳೆಯುತ್ತಿದ್ದ ಮರ, ಗಿಡ, ದವಸ, ಧಾನ್ಯ ಮುಂತಾದವುಗಳನ್ನು ಹೆಸರಿಸುವ ಸಾಧ್ಯತೆಗಳಿವೆ.

೫. ಪ್ರಮಾಣವಾಚಕ ಸ್ಥಳನಾಮಗಳು

ಒಂದೇ ಹೆಸರಿನ ಹಲವಾರು ನಾಮಗಳು ಇರುವ ಕಡೆ ಆ ಪ್ರದೇಶಗಳನ್ನು ಗುರುತಿಸಲು ಹಿರಿದು>ಕಿರಿದು, ಚಿಕ್ಕದು>ದೊಡ್ಡದು, ಮೇಲೆ>ಕೆಳಗೆ ಎಂಬ ಪರಿಮಾಣಗಳನ್ನು ಬಳಸಿಕೊಂಡು ಕೆಲವು ಸ್ಥಳನಾಮಗಳು ನಿಷ್ಪತ್ತಿಯಾಗಿವೆ. ಅಂತಹ ಸ್ಥಳನಾಮಗಳು ಈ ಕೆಳಕಂಡಂತಿವೆ.

ಸ್ಥಳನಾಮಗಳಿಗೆ ಉದಾಹರಣೆ: ಕೆಳಗಿನ ಕಣಿವೆ.

## ೬. ಖನಿಜ ಸೂಚಕ

ಖನಿಜಗಳು ಯಥೇಚ್ಛವಾಗಿ ದೊರೆಯುವ ಸ್ಥಳಗಳಿಗೆ ಅವುಗಳ ಹೆಸರುಗಳು ಆ ಸ್ಥಳನಾಮಕ್ಕೆ ಬಂದಿರುತ್ತವೆ. ನಮ್ಮ ಕರ್ನಾಟಕದಲ್ಲಿ ತಾಮ್ರ, ಕಬ್ಬಿಣದ ನಿಕ್ಷೇಪಗಳಿವೆ. ಚಿನ್ನ, ಬೆಳ್ಳಿ ಮುಂತಾದ ಖನಿಜಗಳು ಯಥೇಚ್ಛವಾಗಿ ದೊರೆಯುತ್ತವೆ. ಆದ್ದರಿಂದ ಅವುಗಳ ಮುಖಾಂತರ ಸ್ಥಳನಾಮಗಳ ಹೆಸರುಗಳನ್ನು ಸೂಚಿಸಲಾಗಿದೆ.

## ೭. ದಿಕ್ಕುಸೂಚಕ

ಒಂದು ಪ್ರದೇಶದ ಸ್ಥಳಗಳನ್ನು ಗುರುತಿಸುವಲ್ಲಿ ದಿಕ್ಕು, ಎಡೆ, ರಸ್ತೆ, ಗಡಿ ಮುಂತಾದ ವಾರ್ಗಿಕಗಳನ್ನು ಒಳಗೊಂಡ ಮತ್ತು ಒಂದು ಭೌಗೋಳಿಕ ಹಿನ್ನೆಲೆಯನ್ನು ಗುರುತಿಸಲು ಸ್ಥಳನಾಮಗಳು ಕಂಡುಬರುತ್ತವೆ.

ಸ್ಥಳನಾಮಗಳಿಗೆ ಉದಾಹರಣೆ: ಎಡೆಯಹಳ್ಳಿ.

## ೮. ಪ್ರಾಣಿವಾಚಕ

ಆದಿಮಾನವನ ಮುಖ್ಯ ಕಸುಬಾಗಿದ್ದ ಪಶುಪಾಲನೆಯಿಂದ ಅವನು ಕೃಷಿ ಕಲಿತುಕೊಂಡ ಕೆಲವೊಂದು ಪ್ರಾಣಿಗಳನ್ನು ಸಾಕಲು ಕಲಿತುಕೊಂಡನು. ಇದಲ್ಲದೇ ಪ್ರಕೃತಿಯಲ್ಲಿ ಆಯಾ ಪ್ರದೇಶಕ್ಕೆ ಅನುಗುಣವಾಗಿ ಯಾವ ಪ್ರಾಣಿಗಳು ಅತಿ ಹೆಚ್ಚು ಸಿಗುತ್ತವೆಯೋ, ಆ ಪ್ರಾಣಿಗಳ ಹೆಸರಿನಲ್ಲಿಯೇ ಸ್ಥಳನಾಮಗಳನ್ನು ಗುರುತಿಸಿಕೊಂಡರು. ಜನಪದ ಅಥವಾ ಶಿಷ್ಟರ

ಮನೋಭಾವನೆಯನ್ನು ಇವು ವ್ಯಕ್ತಪಡಿಸುತ್ತವೆ. ತಮ್ಮ ಜೀವನದೊಂದಿಗೆ ಒಡುಕುವ ಅಥವಾ ತಮಗೆ ಅತಿಮಾನುಷವೆಂದು ತೋರುವ ಪ್ರಾಣಿ ಪಕ್ಷಿಗಳ ಹೆಸರನ್ನು ತಮ್ಮ ವಾಸದ ನೆಲೆಗಳಿಗೆ ನಿರ್ದೇಶಿಸುತ್ತಾರೆ.

ಸ್ಥಳನಾಮಗಳಿಗೆ ಉದಾಹರಣೆ: ಆಪಿಮಡು, ಕೋಣಸಾಗರ, ಕರಡಿಹಳ್ಳಿ.

**೪.೧.೨. ಸಾಂಸ್ಕೃತಿಕ ಸ್ಥಳನಾಮಗಳು**

ನಿಸರ್ಗ ಅವಲಂಬಿಯಾಗಿದ್ದ ಮಾನವನು ಪ್ರಾರಂಭದಲ್ಲಿ ಅಲೆಮಾರಿಯಾಗಿ ಜೀವನ ಸಾಗಿಸುತ್ತಿದ್ದು, ನಂತರ ಒಂದೆಡೆ ನೆಲೆನಿಂತು ಪಶುಪಾಲನೆ ಹಾಗೂ ಕೃಷಿಯನ್ನು ಕೈಗೊಂಡು ಆಹಾರ ಉತ್ಪಾದನೆಯಲ್ಲಿ ತೊಡಗಿ ಗ್ರಾಮಗಳನ್ನು ಸ್ಥಾಪಿಸಿಕೊಂಡು, ಬದುಕಲು ಪ್ರಾರಂಭಿಸಿದ ಅಂದಿನಿಂದ ಅವನ ಸಾಂಸ್ಕೃತಿಕ ಬದುಕು ವಿಕಾಸವಾಗಿ ತನ್ನದೇ ಆದ ಜೀವನ ರೀತಿ–ನೀತಿ, ಆಚಾರ–ವಿಚಾರ, ನಡೆ–ನುಡಿ, ವೇಷ–ಭಾಷೆ, ಜಾತಿ–ಜನಾಂಗ, ವಿಧಿ–ವಿಧಾನಗಳನ್ನು ರೂಪಿಸಿಕೊಂಡನು. ವ್ಯಕ್ತಿಗಳ ಜೀವನಕ್ರಮದಿಂದ ಅವನ ಸಂಸ್ಕೃತಿಯನ್ನಳೆಯಲು ಸಾಧ್ಯವಿದೆ. ಸ್ಥಳನಾಮಗಳಲ್ಲಿ ಅವನ ಬದುಕಿನ ಬಗ್ಗೆ ಅನೇಕ ವಿಷಯಗಳುಂಟು. ಅವುಗಳ ಅಧ್ಯಯನದಿಂದ ಜನಗಳ ಮನೋಭಾವನೆ ವ್ಯಕ್ತಿತ್ವ, ಜಾತಿ, ರಾಜಕೀಯ ಮತ್ತು ಸಾಮಾಜಿಕ ವಿಕಸನ ಮೊದಲಾದವುಗಳನ್ನು ಅರಿಯಬಹುದು.

ಸಾಂಸ್ಕೃತಿಕ ಸ್ಥಳನಾಮಗಳನ್ನು ಈ ಕೆಳಗಿನಂತೆ ವಿಭಾಗಿಸಿ ನೋಡಬಹುದು.

**೧. ವ್ಯಕ್ತಿವಾಚಕ ಸ್ಥಳನಾಮಗಳು**

ಕೆಲವು ಪ್ರಮುಖ ಅರಸು ಮನೆತನಗಳಲ್ಲಿ ಪಾಳೇಗಾರರು, ಪ್ರಸಿದ್ಧ ವ್ಯಕ್ತಿಗಳು, ಪ್ರಾಂತ್ಯಾಧಿಕಾರಿಗಳು ಇವರುಗಳ ಹೆಸರಿನ ಸ್ಥಳನಾಮಗಳು ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಕಂಡುಬರುತ್ತವೆ. ರಾಜನ ಪ್ರೀತಿಗೆ ಪಾತ್ರರಾಗಿದ್ದ ಪ್ರಾಂತ್ಯಾಧಿಕಾರಿಗಳ ಹೆಸರಿನ ಮೇಲೆ ಹಳ್ಳಿಗಳು ನಿರ್ಮಾಣವಾಗಿವೆ. ಕೆಲವು ಮಹಿಳೆಯರ ಹೆಸರಿನ ಸ್ಥಳನಾಮಗಳು ಕೂಡ ಕಂಡುಬರುತ್ತವೆ. ರಾಜರು ಭೂಮಿಯನ್ನು ಉಂಬಳಿ ಅಥವಾ ದಾನವಾಗಿ ನೀಡಿ ಆ ಊರಿಗೆ ತನ್ನ ರಾಣಿಯರ ಹೆಸರುಗಳನ್ನು ನಾಮಕರಣ ಮಾಡುವುದಾಗಿ ಶಾಸನಾಧಾರಗಳಿಂದ ತಿಳಿದುಬರುತ್ತದೆ.

ಸ್ಥಳನಾಮಗಳಿಗೆ ಉದಾಹರಣೆ: (ಪುರುಷರನ್ನು ಸೂಚಿಸುವ) ಬೊಮ್ಮಲಿಂಗನಹಳ್ಳಿ.

ಸ್ಥಳನಾಮಗಳಿಗೆ ಉದಾಹರಣೆ: (ಮಹಿಳೆಯರನ್ನು ಸೂಚಿಸುವ) ನಾಗಸಮುದ್ರ.

**೨. ದೈವವಾಚಿ**

ನಮ್ಮ ಪೂರ್ವಜರು ಕುಲದೈವ, ಗ್ರಾಮದೇವತೆ, ಪ್ರಾದೇಶಿಕ ದೈವ ಹೀಗೆ ಒಂದೊಂದು ದೈವಗಳನ್ನು ಮಾಡಿಕೊಂಡು ಅವುಗಳಲ್ಲಿ ನಂಬಿಕೆ, ಭಯ, ಭಕ್ತಿ, ಶ್ರದ್ಧೆ, ಗೌರವಗಳನ್ನು ತೋರಿಸುತ್ತಾ ಕೆಲವೊಂದು ಸಸ್ಯಗಳಿಗೂ ಕೂಡ ದೈವದ ಹೆಸರನ್ನು ಕಲ್ಪಿಸಿ ಪೂಜಿಸಿಕೊಂಡು,

ನಂಬಿಕೊಂಡು ಬಂದಿದ್ದಾರೆ. ಅಂತಹ ದೈವವಾಚಿಕ ಸ್ಥಳನಾಮಗಳನ್ನು ಮೊಳಕಾಲ್ಮೂರು ತಾಲ್ಲೂಕಿನಲ್ಲಿಯೂ ಕಾಣಬಹುದು.

ಸ್ಥಳನಾಮಗಳು: ಜಟಂಗಿ ರಾಮೇಶ್ವರ, ದೇವಸಮುದ್ರ, ಬ್ರಹ್ಮಗಿರಿ.

**೩. ಕೋಟೆ/ಸೈನಿಕ ಕೇಂದ್ರಗಳು**

ರಾಜರು ತಮ್ಮ ಆಳ್ವಿಕೆಯನ್ನು ದಕ್ಷತೆಯಿಂದ ನಡೆಸಲು ಮತ್ತು ಸೈನಿಕರು ಸುಸಜ್ಜಿತ ಶಸ್ತ್ರಾಸ್ತ್ರಗಳನ್ನು ಗೌಪ್ಯವಾಗಿಡಲು ಕೋಟೆಗಳಿಗೆ ಮುತ್ತಿಗೆ ಹಾಕಿದಂತೆ, ಬೇರೆಯವರಿಗೆ ಒಳಗಡೆ ಪ್ರವೇಶವಿಲ್ಲದಂತೆ, ಒಂದೇ ಕಡೆ ದ್ವಾರಬಾಗಿಲುಗಳನ್ನು ಹೊಂದಿರುವ ಗಿರಿದುರ್ಗ, ಜಲದುರ್ಗ, ವನದುರ್ಗ, ಸ್ಥಳಗಳನ್ನು ಕಟ್ಟಿಕೊಂಡು, ಭದ್ರತೆಯನ್ನು ಕಾಯ್ದುಕೊಂಡು ಆಡಳಿತ ನಡೆಸುತ್ತಿದ್ದರು. ಅಂತಹ ಸ್ಥಳಗಳಿಗೆ ಕೋಟೆ, ದುರ್ಗ, ಪುರಗಳನ್ನು ಕಟ್ಟಿಕೊಂಡು, ಆ ಸ್ಥಳಕ್ಕೆ ಭೌಗೋಳಿಕತೆಗೆ ಅನುಗುಣವಾಗಿರುವ ಸ್ಥಳನಾಮಗಳನ್ನು ಈ ಕೆಳಗಿನಂತೆ ಗಮನಿಸಬಹುದು.

ಸ್ಥಳನಾಮಗಳಿಗೆ ಉದಾಹರಣೆ: ತಿಂಮಲಪುರ.

**೪. ವಲಸೆಗೆ ಸಂಬಂಧಿಸಿದಂತೆ**

ಪ್ರಾಚೀನ ಕಾಲದ ಜನರು ತಮಗೆ ಮೂಲಭೂತ ಅವಶ್ಯಕತೆ ಇರುವಂತಹ ವಸ್ತುಗಳು ಎಲ್ಲಿ ಸಿಗುತ್ತವೆಯೋ ಅಲ್ಲಿಗೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ವಲಸೆ ಅಥವಾ ಗುಳೇ ಹೋಗುವುದು ವಾಡಿಕೆಯಾಗಿತ್ತು. ಅದನ್ನು ವಲಸೆ ಅಥವಾ ಗುಳೆ ಹೋಗುವುದು ಎನ್ನುತ್ತಾರೆ. ಈ ರೀತಿ ಗುಳೆ ಹೋದ ಕುರುಹುಗಳಾಗಿ ಕೆಳಗಿನ ಸ್ಥಳನಾಮಗಳು ಕಂಡುಬರುತ್ತವೆ.

ಸ್ಥಳನಾಮಗಳಿಗೆ ಉದಾಹರಣೆ ಉರುತಳ–ಉರ್ಥಾಳೆ.

**೫. ಜಾತಿವಾಚಕ**

ಸಾಮಾಜಿಕ ರಚನೆಯಲ್ಲಿ ಮಾನವನಿಗೆ ಲಿಂಗ, ವರ್ಗ, ಜಾತಿ ಮುಂತಾದ ಅಂಶಗಳಿವೆ. ಲಿಖಿತ ಆಧಾರಗಳ ಕೊರತೆಯಿದ್ದ ಸಂದರ್ಭದಲ್ಲಿ ಯಾವುದೇ ಜನಾಂಗ ನೆಲೆಸಿದ್ದ ಪ್ರದೇಶದ ಸ್ಥಳನಾಮಗಳಲ್ಲಿ ಸಮಾನ ರೂಪಗಳನ್ನು ಪರಿಶೀಲಿಸಬೇಕು. ಇದರಿಂದ ಆಯಾ ನಾಡಿನ ಸಾಂಸ್ಕೃತಿಕ ಸ್ತರಗಳ ಜನಾಂಗಗಳ ಅಸ್ತಿತ್ವವು ಸ್ಥಳನಾಮಗಳಲ್ಲಿ ಅಭಿವ್ಯಕ್ತಿಗೊಂಡಿರುವುದನ್ನು ಕಾಣಬಹುದು. ಸ್ಥಳನಾಮ ನಿರ್ದೇಶನವು ಜಾತಿ ಅಥವಾ ವರ್ಗದ ಪ್ರತಿನಿಧಿಯಾಗಿ ಕಾಣಿಸಿಕೊಳ್ಳುತ್ತದೆ. ಮಾನವನ ಪ್ರಾಚೀನ ಕಾಲದಲ್ಲಿ ನಿಸರ್ಗದೊಂದಿಗೆ ಜೀವನವನ್ನು ಸಾಗಿಸುತ್ತಿದ್ದ ಸಂದರ್ಭದಲ್ಲಿ ನಿಸರ್ಗವಾಚಿ ಸ್ಥಳನಾಮಗಳು ಉಗಮಗೊಂಡವು. ಕಾಲಕ್ರಮೇಣ ನಿಸರ್ಗಕ್ಕಿಂತ ತನ್ನ ಜನಾಂಗದ ಬಗೆಗೆ ವ್ಯಕ್ತಿಗಳು ಮೋಹ ಬೆಳೆಸಿಕೊಂಡ ಪರಿಣಾಮ ಜನಾಂಗವಾಚಿ ಸ್ಥಳನಾಮಗಳು ತಲೆದೋರಲಾರಂಭಿಸಿದವು. ಹೀಗಾಗಿ ಜನಾಂಗ ಅಥವಾ ಜಾತಿಯ ನೆಲೆಯಲ್ಲಿ ನಿರ್ದೇಶನಗೊಂಡಿರುವ ಸ್ಥಳನಾಮಗಳನ್ನು ಆಯಾ ಸಮುದಾಯಗಳ ಹಿನ್ನೆಲೆಯಲ್ಲಿ ಗುರುತಿಸುವ ಪ್ರಯತ್ನವನ್ನು ಕೆಳಗಿನ ವಿವೇಚನೆಯಲ್ಲಿ ಮಾಡಲಾಗಿದೆ.

**ಅ. ಬ್ರಾಹ್ಮಣರು:** ಪ್ರಾಚೀನ ಕಾಲದಿಂದಲೂ ಬ್ರಾಹ್ಮಣರು ಪ್ರತಿಷ್ಠಿತ ಸಮುದಾಯವಾಗಿದ್ದು, ಗರಿಷ್ಟ ಸ್ಥಾನಮಾನವನ್ನು ಗುರುತಿಸಿಕೊಂಡು ಸ್ಥಳನಾಮಗಳ ಮೇಲೆ ತನ್ನ ಅಸ್ತಿತ್ವವನ್ನು ಸ್ಥಾಪಿಸಿರುವುದು ಮನವರಿಕೆಯಾಗುತ್ತದೆ. ಪ್ರಾರಂಭದಲ್ಲಿ ವೈದಿಕರು ತಮ್ಮ ಕೆಲವು ನೆಲೆಗಳಿಗೆ ವೈಷ್ಣವ ಸಂಬಂಧಿ ಹೆಸರುಗಳನ್ನು ನಿರ್ದೇಶಿಸಿಕೊಂಡಿದ್ದರು. ಅಂದಿನ ರಾಜಪರಂಪರೆಯು ಬ್ರಾಹ್ಮಣರಿಗಾಗಿ ಅಗ್ರಹಾರಗಳನ್ನು ನಿರ್ಮಿಸಿಕೊಟ್ಟಿದ್ದುದು ತಿಳಿದುಬರುತ್ತದೆ. ಅಗ್ರಹಾರಗಳಲ್ಲದೇ ಬ್ರಾಹ್ಮಣ, ಭಂಟ, ಬೊಮ್ಮ ಮೊದಲಾದ ಹೆಸರುಗಳಿಂದ ಆರಂಭವಾಗುವ ಸ್ಥಳನಾಮಗಳು ಕರ್ನಾಟಕದಾದ್ಯಂತ ದೊರೆಯುತ್ತವೆ. ಬ್ರಹ್ಮವು ಸಂಸ್ಕೃತದಿಂದ ತದ್ಬವಗೊಂಡು ಬೊಮ್ಮ ಆಗಿದೆ. ಭಟ್ಟ ಪದವು ಬ್ರಾಹ್ಮಣರ ವಾಸ್ತವ್ಯದ ಹೆಸರನ್ನು ಪ್ರತಿನಿಧಿಸುತ್ತದೆ. ಈ ಪರಿಸರದಲ್ಲಿ ಕಾಣಸಿಗುವ ಬ್ರಾಹ್ಮಣರಿಗೆ ಸಂಬಂಧಿಸಿದ ಸ್ಥಳನಾಮಗಳು.

ಸ್ಥಳನಾಮಗಳಿಗೆ ಉದಾಹರಣೆ: ಬ್ರಹ್ಮಗಿರಿ, ಬೊಮ್ಮಲಿಂಗನಹಳ್ಳಿ.

ಒಟ್ಟಾರೆ ಸ್ಥಳನಾಮ ವೈವಿಧ್ಯ ಪೂರ್ಣವಾದ ವಿಸ್ತಾರ ಪ್ರಪಂಚವಾಗಿದ್ದು, ಸ್ಥಳನಾಮಗಳನ್ನು ವರ್ಗೀಕರಿಸಿ ನೋಡುವುದರಿಂದ ನಮಗೆ ತಿಳಿಯದಂತಹ ಕೆಲವೊಂದು ವಿಚಾರಧಾರೆಗಳು ತಿಳಿದುಬರುತ್ತವೆ. ಕೆಲವೊಂದು ಸ್ಥಳನಾಮಗಳು ಹಳೆಯ ರೂಪವನ್ನು ಶೇಷಗೊಳಿಸಿಕೊಂಡು ಹೊಸ ರೂಪವನ್ನು ಹೊಂದಿರುವುದು ಕಂಡುಬರುತ್ತದೆ. ಸ್ಥಳನಾಮ ಅಧ್ಯಯನವು ತುಂಬಾ ಜಟಿಲ ಸಂಕೀರ್ಣವೆಂದು ಹೇಳಬಹುದು. ಸಂಶೋಧಕನು ಸ್ವಲ್ಪ ಯಾಮಾರಿದರೂ ಕೂಡ ಅವುಗಳ ಅರ್ಥ ಸಾಧ್ಯತೆಗಳು ಕಡಿಮೆಯಾಗುತ್ತವೆ.

ಸ್ಥಳನಾಮಗಳಿಗೆ ಅನೇಕ ಸಾವಿರ ವರ್ಷಗಳ ಇತಿಹಾಸವಿದೆ. ಮಾನವನ ಪ್ರಾಚೀನ ಇತಿಹಾಸದ ಮೇಲೆ ಸ್ಥಳನಾಮಗಳು ಬೆಳಕು ಚೆಲ್ಲುತ್ತವೆ. ನಿಸರ್ಗ, ಜನಾಂಗ, ದೈವಗಳ ಪರಿಕಲ್ಪನೆ, ವ್ಯಾಪಾರ, ಸಸ್ಯ, ಗಿಡ, ಮರ, ಪ್ರಾಣಿ-ಪಕ್ಷಿ, ಖನಿಜ ಸಂಪತ್ತು, ರಾಜಮನೆತನಗಳು ಇತ್ಯಾದಿ ವಿಚಾರಧಾರೆಗಳು ಸ್ಥಳನಾಮ ಅಧ್ಯಯನದಿಂದ ತಿಳಿದುಬರುತ್ತದೆ. ಸ್ಥಳನಾಮಗಳು ಭಾಷಾವಿಜ್ಞಾನಿ, ಸಮಾಜಶಾಸ್ತ್ರಜ್ಞ ಇತಿಹಾಸತಜ್ಞರಿಗೆ ಅಧ್ಯಯನ ಮಾಡಲು ಭತ್ತದ ತೊರೆಗಳಾಗಿವೆ.

## ೪.೨. ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳ ಪಟ್ಟಿ

| ಶಾಸನ ಸಂಖ್ಯೆ | ದೊರಕಿದ ಸ್ಥಳ | ಶಾಸನದ ಕಾಲ ಕ್ರಿ.ಶ. | ಉಲ್ಲೇಖಿತ ಸ್ಥಳನಾಮಗಳು |
|---|---|---|---|
| ೧. | ದೇವಸಮುದ್ರ | – | ರಾಯದುರ್ಗ |
| | | | ದೇವಸಮುದ್ರ |
| | | | ಉರುಮ |
| | | | ಮುರವಡಿ |
| | | | ದಾಕವಾಡಿ |
| | | | ದುಡುಗೂರು |
| | | | ಜಂಬಲಕೆಯ |
| | | | ಪೊಕ್ಕುರಿಕೆಯ |
| | | | ಪೊಕ್ಕುರಿಕೆ |
| ೪. | ಮುರಡಿ | ೧೫೫೬ | ಮುರುವುಡಿ |
| | | | ಬುಕ್ಕರಾಯಪುರ |
| ೫. | ಕರಡಿಹಳ್ಳಿ | ೧೫೫೬ | ಕರಡಿಪಲ್ಲೆ |
| | | | (ಹರಿಹರಾಯಪುರ) |
| ೨೫ | ಸಂತೇಗೋವಿ | – | ಬಾಣರಾದಿ |
| | | | ತುಮುರುಹಳಿ |
| | | | ವಿಟ್ಲಪುರ |
| | | | ಆವಿನಮಡು |
| | | | ತಿಂಮಲಪುರ |
| | | | ಬೆಂನ್ನೆಯನಹಳಿ |
| | | | ಬೊಂಮಲಗುಂಡ |
| | | | ಲಿಂಗೈನಹಳಿ |
| | | | ತಿಂಮವೆಲಿಂಗ್ಯೆಯನಹಳ್ಳಿ |

| | | | |
|---|---|---|---|
| ೨೯ | ರಾಯಸಾಗರ | ೧೦೬೪ | ಗುಡ್ಡಹಳಿ |
| ೩೧ | ರಾಮಸಾಗರ | ೧೩೮೭ | ಜಿಯರಹಳಿ |
| ೩೭ | ರಾಮಸಾಗರ | – | ಬೋವನಕಾಲುವೆ |
| ೪೦ | ನುಂಕೆಗ್ರಾಮ | – | ಚಾಮಗೌಂಡನಹಳ್ಳಿ |
| | | | ಹಿರಿಯಕೆಜೆ |
| ೪೩ | ನಾಗಸಮುದ್ರ | ೧೫೫೪ | ನಾಗಸಮುದ್ರ |
| | | | ಇಸಿಲ |
| | | | ಸುವರ್ಣಗಿರಿ |
| | | | ಬ್ರಹ್ಮಗಿರಿ |
| | | | ವಿಜಯಗಿರಿ |
| | | | ಲುಂಕೆಕೋಟೆ |
| | | | ಕಂಪಲಿ |
| | | | ಕಣೇಕಲ್ಲು |
| | | | ಬದಂಡಾ |
| | | | ಬ್ರಹ್ಮೇಶ್ವರ |
| | | | ರೊದ್ದ |
| | | | ಬೆಣಕಲ್ಲು |
| | | | ಸಂತೆಗೋವಿ |
| | | | ರಾಜಾಪುರ |
| | | | ಉಬ್ಬಲಗುಂಡಿ |
| | | | ಮೆಟ್ರಿಕೆ |
| | | | ಕೋನಸಾಗರ |
| | | | ಹಿರೇ ಆರ್ಯಗುಡ್ಡ |
| | | | ಸಿದ್ಧರಪುರ |
| | | | ಪೆರೂರಹಳ್ಳಿ |

## ೪.೩. ಶಾಸನೋಕ್ತ ಸ್ಥಳನಾಮಗಳ ಪ್ರಾಚೀನ ಮತ್ತು ಪ್ರಸ್ತುತ ರೂಪಗಳು

**'ಆ'ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ಆವಿನ ಮೊಡು – ಆವಿನಮಡು

**'ಉ'ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ಉಬ್ಬಲಗಂಡಿ – ಉಬ್ಬಲಗಂಡಿ

ಉರುತಳ – ಉರ್ಥಾಳ್

**'ಎ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ಎಡೆಯೂರ – ಇಡೇಹಳ್ಳಿ

**'ಕ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ಕರಡಿಪಲ್ಲೆ – ಕರಡಿಹಳ್ಳಿ

ಕೋನಸಾಗರ – ಕೋನಸಾಗರ

ಕೋಣಸಾಗರ

**'ಗ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ಗುಡ್ಡಹಳಿ – ಗುಡ್ಡದಹಳ್ಳಿ

**'ಜ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ಜಟಂಗಿ ರಾಮೇಶ್ವರ – ಜಟಂಗಿ ರಾಮೇಶ್ವರ

ಜಂಬುಲ ಮಲಿಕೆ – ಜಂಬಲಿಕೆಯ ಗ್ರಾಮ – ಜಂಬಾಳಮಲ್ಕಿ

ಜಿಯರಹಳ್ಳಿ – ರಾಮಸಾಗರ

**'ತ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ತಿಂಮಲಾಪುರ – ತಿಮ್ಮಲಾಪುರ – ಬಂಡೆತಿಮ್ಮಲಾಪುರ

ತುಪದಹಳಿ – ತುಪ್ಪದಹಳ್ಳಿ

**'ದ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ದಾಕವಾಡಿ – ದಾಖವಾಡಿ

ದೇವಸಮುದ್ರ – ದೇವಸಮುದ್ರ

**'ನ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ನಾಗಸಮುದ್ರ – ನಾಗಸಮುದ್ರ

**'ಪ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ಪೊಕ್ಕುರಿಕೆ – ಪಕುರ್ತಿ

ಪೆರೂರಹಳ್ಳಿ – ಹೆರೂರಹಳ್ಳಿ

**'ಬ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ಬಾಣರಾವಿ – ಬಾಂಡ್ರಾವಿ

ಬ್ರಹ್ಮೇಶ್ವರ – ಬ್ರಹ್ಮಗಿರಿ

ಬೊಂಮಲಗುಂಡ ಲಿಂಗ್ಯೆಯನಹಳ್ಳಿ – ಬೊಮ್ಮಲಿಂಗನಹಳ್ಳಿ

**'ಮ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ಮುರವಡಿ – ಮುರಡಿ

ಮೇಟಿಕುರಿಕೆ – ಮೇಟಿಕುರ್ಕೆ

**'ರ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ರೊದ್ದ – ರೊಪ್ಪ

ರಾಜಾಪುರ – ರಾಜಾಪುರ

**'ಹ' ಕಾರದಿ ರೂಪಗಳು**

ಪ್ರಾಚೀನ – ಪ್ರಸ್ತುತ

ಹೆರೂರಹಳ್ಳಿ – ಹೆರೂರಹಳ್ಳಿ

ಭಾಷೆ ಎಂಬುದು ನಿಂತ ನೀರಲ್ಲ. ಅದು ಕಾಲಕ್ಕೆ ಅನುಗುಣವಾಗಿ ಬದಲಾಗುತ್ತಾ ಇರುತ್ತದೆ. ಯಾವುದೇ ಭಾಷೆಯು ತನ್ನ ಸ್ವಂತ ಅಸ್ತಿತ್ವದಿಂದ ಬದುಕಿ ಉಳಿಯಬಾರದು. ಅದು ಇತರ ಭಾಷೆಗಳಿಂದ ಸ್ವೀಕೃತ ಪದಗಳನ್ನು ಬಳಸಿಕೊಂಡಾಗ ಮಾತ್ರ ಆ ಭಾಷೆಯು ಪ್ರಬುದ್ಧವಾಗಿ ಬೆಳೆಯಲು ಸಾಧ್ಯವಾಗುತ್ತದೆ. ಹಾಗೆ ಕೊಡುಕೊಳ್ಳುವಿಕೆಯಿಂದ ಭಾಷೆಯಲ್ಲಿ ಕೆಲವೊಂದು ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತವೆ. ಆಗ ತನ್ನ ರೂಪವನ್ನು ಬದಲಿಸಿಕೊಳ್ಳುತ್ತದೆ. ಜನಪದ ಭಾಷೆ, ಶಿಷ್ಟ ಭಾಷೆಗೆ ಅನೇಕ ವ್ಯತ್ಯಾಸಗಳಿವೆ. ಅದೇ ರೀತಿ ಶಾಸನ ಭಾಷೆಗೂ, ಪ್ರಸ್ತುತ ಭಾಷೆಗೂ ಅನೇಕ ರೀತಿಯಲ್ಲಿ ವ್ಯತ್ಯಾಸಗಳನ್ನು ಗಮನಿಸಬಹುದು.

**ಅಡಿ ಟಿಪ್ಪಣಿಗಳು**

೧. ಚಂದ್ರಕೊಡೆ, ಹಂಪನಾ, ಪುಟ–೩

೨. ಸ್ಥಳನಾಮ ವ್ಯಾಸಂಗ, ದೇಜಗೌ, ಪುಟ–೭೭

೩. ಕಲ್ಬುರ್ಗಿ ಎಂ.ಎಂ., ಮಾರ್ಗ ಸಂಪುಟ–೨, ಪುಟ–೫೫೭

೪. ಜಾಜಿ ದೇವೇಂದ್ರಪ್ಪ, ಆಂಧ್ರ–ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು, ಪುಟ–೫೯

೫. ವಿಶ್ವನಾಥಯ್ಯ ಸಿ.ಎಂ., ಕಡೂರು ತಾಲ್ಲೂಕಿನ ಸಸ್ಥಳನಾಮಗಳು, ಪುಟ–೨೧

೬. ಚೆನ್ನಬಸವಯ್ಯ ಹಿರೇಮಠ, ಕುರುಗೋಡ ಸಿಂಧರು, ಪುಟ–೧೧೦

೭. ವಿಶ್ವನಾಥಯ್ಯ ಸಿ.ಎಂ., ಕಡೂರು ತಾಲ್ಲೂಕಿನ ಸ್ಥಳನಾಮಗಳು, ಪುಟ–೨೧



# ಅಧ್ಯಾಯ: ಐದು

# ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳ ವಿಶ್ಲೇಷಣೆ

## ೫.೧. ಭಾಷಿಕ ವಿಶ್ಲೇಷಣೆ

ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳಲ್ಲಿ ಅನೇಕ ವಿಧವಾದ ಭಾಷಿಕ ಮತ್ತು ವ್ಯಾಕರಣಕ್ಕೆ ಸಂಬಂಧಿಸಿದ ವಿಷಯಗಳು ಕಂಡುಬರುತ್ತವೆ. ಈ ಪ್ರದೇಶದ ಸ್ಥಳನಾಮಗಳ ಸಾಮಾನ್ಯ ಪದಗಳು ವ್ಯಂಜನಾಂತ್ಯವಾಗಿಲ್ಲ, ಸ್ವರಾಂತ್ಯವಾಗಿ ಕಂಡುಬರುತ್ತವೆ. ಕೆಲವೊಂದು ಪದಗಳಲ್ಲಿ ಧ್ವನಿಮಾ ವ್ಯತ್ಯಾಸಗಳಾಗುವುದುಂಟು. ಪದಗಳ ಸಂಧಿಸ್ಥಾನದಲ್ಲಿ ವ್ಯಂಜನಗುಚ್ಛಗಳು ಬರುತ್ತವೆ. ಅವು ಸಜಾತಿ ಹಾಗೂ ವಿಜಾತಿಗಳಾಗಿ ಬಳಕೆಯಾಗಿವೆ.

### ೨. ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳ ವರ್ಣಮಾಲೆ ವಿಷಯಗಳು

ಮೊಳಕಾಲ್ಮೂರು ಪರಿಸರದ ಸ್ಥಳನಾಮಗಳು ವ್ಯಂಜನಾಂತವಾಗಿಲ್ಲದೆ, ಸ್ವರಾದಿಯಾಗಿ ಕಂಡುಬರುತ್ತವೆ.

೧. ಅ : ಅಮಿನಮೊಡು

೨. ಉ : ಉಡೇಹಳ್ಳಿ

೩. ಊ : ಊಬ್ಬಲಗಂಡಿ, ಊರುತಳ

೪. ಕ್,ಗ್ : ಕರಡಿಹಳ್ಳಿ, ಕೋನಸಾಗರ, ಕೆಳಗಿನ ಕಣಿವೆ, ಗುಡ್ಡದಹಳ್ಳಿ.

೫. ಜ್ : ಜಟಂಗಿ ರಾಮೇಶ್ವರ, ಜಂಬಾಳ ಮಲ್ಲಿ.

೬. ತ್, ದ್ : ತುಪ್ಪದಹಳ್ಳಿ, ತಿಮ್ಮಲಾಪುರ, ದೇವಸಮುದ್ರ

೭. ಪ್, ಬ್ : ಪಕುರ್ತಿ, ಬಾಂಡ್ರಾವಿ, ಬ್ರಹ್ಮಗಿರಿ, ಬೊಮ್ಮಲಿಂಗನಹಳ್ಳಿ

೮. ನ : ನಾಗಸಮುದ್ರ

೯. ಮ್ : ಮುರಡಿ

೧೦. ಹ್ : ಹೆರೂರಹಳ್ಳಿ

೩. ಮೊಳಕಾಲ್ಮೂರು ತಾಲ್ಲೂಕಿನ ಸ್ಥಳನಾಮಗಳಲ್ಲಿ ವ್ಯಂಜನಾಗುಚ್ಚಗಳು ಸಂಧಿಸ್ಥಾನದಲ್ಲಿ ಕಾಣಿಸಿಕೊಳ್ಳುತ್ತವೆ.

೧. ಡ್ ಗುಚ್ಚ ಡ್-ಡ್ : ಗುಡ್ಡದಹಳ್ಳಿ

೨. ನ್ ಗುಚ್ಚ ನ್-ನ್ : ನ್-ಡ್-ರ್ : ಬಾಂಡ್ರಾವಿ

೩. ಪ್ ಗುಚ್ಚ ಪ್-ಪ್ : ತುಪ್ಪದ ಹಳ್ಳಿ, ರೊಪ್ಪ

೪. ಬ್ ಗುಚ್ಚ ಬ್-ರ್: ಬ್ರಹ್ಮಪುರ, ಬ್ರಹ್ಮಗಿರಿ

೫. ಮ್ ಗುಚ್ಚ ಮ್-ಮ್ : ಬೊಮ್ಮಲಿಂಗನಹಳ್ಳಿ, ಬಂಡೆತಿಮ್ಮಲಾಪುರ

೬. ಶ್ ಗುಚ್ಚ ಶ್-ವ್ : ಜಟಂಗಿ ರಾಮೇಶ್ವರ

೪. ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕ (Specific and Generic) ಎಂಬೆರಡು ಘಟಕಗಳಲ್ಲಿ ವಿಭಜಿಸಿ ಅಧ್ಯಯನ ಮಾಡುವುದುಂಟು. ಕೆಲ ಹೆಸರುಗಳು ಎರಡಕ್ಕಿಂತ ಹೆಚ್ಚು ಘಟಕಗಳನ್ನು ಹೊಂದಿರಬಹುದು. ಅವು ವಿಶಿಷ್ಟದ ಹಿಂದೆ (Prefix) ವಿಶೇಷಣ ಅಥವಾ ಯಾವುದೋ ವಿಷಯ ಸೂಚಕ ಪದಗಳಾಗಿ ಸೇರಿಕೊಂಡಿರುತ್ತವೆ. ಸ್ಥಳನಾಮದ ಮೊದಲನೆಯ ಘಟಕ ಸ್ಥಳಗಳ ಲಕ್ಷಣವನ್ನು ಹೇಳುತ್ತದೆ. ಹಾಗಾಗಿ ಅದನ್ನು ನಿರ್ದಿಷ್ಟ ಎಂದು ಕರೆಯುತ್ತೇವೆ. ಹೀಗೆ ಸೇರಿಕೊಡಂಥವುಗಳನ್ನು ನಿರ್ದಿಷ್ಟವೆಂದೇ ಪರಿಗಣಿಸುವುದುಂಟು. ಇಂತ ಕ್ರಮವನ್ನೇ ಇಲ್ಲಿ ಅನುಸರಿಸಲಾಗಿದೆ.

ನಿರ್ದಿಷ್ಟವೆಂದರೆ ವಿಶಿಷ್ಟ (Specific) ಎಂದರ್ಥ. ಅಂದರೆ ಯಾವುದಾದರೂ ವಿಷಯವನ್ನು ಒಳಗೊಂಡಿರುವಂಥದ್ದು.

ವಾರ್ಗಿಕ ಎಂದರೇ, ಊರುಗಳ ಹೆಸರುಗಳ ಉತ್ತರಾರ್ಧ ಘಟಕ. ಇದರಲ್ಲಿ ವಿಷಯ ಪ್ರಸ್ತಾಪವಿರದು. ವಾರ್ಗಿಕ(Generic)ವು ಸ್ಥಳದ ಭೌತಿಕ ನೆಲೆಯನ್ನು ಸೂಚಿಸುವ ಘಟಕವಾಗಿರುತ್ತದೆ. ಹಾಗಾಗಿ ಅದನ್ನು ವಾರ್ಗಿಕ ಎಂದು ಕರೆಯುತ್ತೇವೆ. ಊರುಗಳನ್ನು ವರ್ಗೀಕರಣಕ್ಕೆ ಒಳಪಡಿಸಬಹುದಾದ ಸಾಮಾನ್ಯ ಘಟಕ ಇದಾಗಿರುತ್ತದೆ. ಸಾಮಾನ್ಯವಾಗಿ ಸ್ಥಳನಾಮಗಳು ಕೂಡುನುಡಿಗಳೇ ಹೊರತು ಅಖಂಡ ಶಬ್ದಗಳಲ್ಲ. ಅಂತೆಯೇ ಕನ್ನಡ, ದ್ರಾವಿಡ ಮೂಲದ ಸ್ಥಲನಾಮಗಳು ಸಾಮಾನ್ಯವಾಗಿ ಎರಡು ಘಟಕ (ಆಕೃತಿ) (Morpbemes)ಗಳಿಂದ ಕೂಡಿರುತ್ತವೆ.

ಉದಾ. ಊರು, ಹಳ್ಳಿ, ಪುರ, ಗ್ರಾಮ, ಗುಡ್ಡ, ಕೆರೆ, ಕುಂದ, ಕೋಟೆ ಈ ಮುಂತಾದ ಘಟಕಗಳಲ್ಲಿ ಒಂದನ್ನೊಳಗೊಂಡು ಕೊನೆಗೊಳ್ಳುವಂಥವು. ನಿರ್ದಿಷ್ಟ ಮತ್ತು ವಾರ್ಗಿಕ ಇವೆರಡೂ

ಪ್ರತ್ಯೇಕ ಆಕೃತಿಮಾಗಳೇ ಈ ಆಕೃತಿಮಾಗಳು ಕೂಡುವಾಗ ಅಲ್ಲಿ ಧ್ವನಿ ವ್ಯತ್ಯಾಸವಾಗುತ್ತವೆ. ನಿಘಂಟು ವಿಜ್ಞಾನಕ್ಕೂ ಈ ರೀತಿಯ ಸ್ಥಳನಾಮಾಧ್ಯಯನದ ಮಹತ್ವ ಕೊಡುಗೆಯಾಗುತ್ತದೆ. ಭಾಷಿಕ ದೃಷ್ಟಿಯಿಂದ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಬರುವ ಕೆಲವು ಊರುಗಳನ್ನು ಈ ಘಟಕಗಳನ್ನಾಯ ವಿಂಗಡಿಸಿರುವುದನ್ನು ಹಾಗೂ ಅವು ರೂಪ ಹಾಗೂ ಧ್ವನಿ ವ್ಯತ್ಯಾಸ ಪಡೆದುದನ್ನು ಇಲ್ಲಿ ಕೆಲವು ಉದಾಹರಣೆಗಳನ್ನು ನೋಡುವುದರ ಮೂಲಕ ತಿಳಿಯಬಹುದಾಗಿದೆ.

ಉದಾ. ನಿರ್ದಿಷ್ಟ + ವಾರ್ಗಿಕ > ಸ್ಥಳನಾಮ

ಮಂಗಳ + ಊರು > ಮಂಗಳೂರು

ಪೆರೂರ + ಹಳ್ಳಿ > ಪೆರೂರಹಳ್ಳಿ

ನಿರ್ದಿಷ್ಟಗಳಿಗೆ ಕೆಲವೊಮ್ಮೆ ಪ್ರತ್ಯಯಗಳು ಅಂಟಿರುವುದು ಉಂಟು.

ಉದಾ. ನಿರ್ದಿಷ್ಟ + ಪ್ರತ್ಯಯ + ವಾರ್ಗಿಕ> ಸ್ಥಳನಾಮ

ಬೊಮ್ಮಲಿಂಗ + ನ + ಹಳ್ಳಿ > ಬೊಮ್ಮಲಿಂಗನಹಳ್ಳಿ

ತುಪ್ಪ + ದ + ಹಳ್ಳಿ > ತುಪ್ಪದಹಳ್ಳಿ

ನಿರ್ದಿಷ್ಟಗಳಿಗೆ ಕೆಲವೊಮ್ಮೆ ಉಪ ಆಕೃತಿಮಾಗಳು ಸೇರಿಸುವುದೂ ಉಂಟು.

ಉಪ ಆಕೃತಿಮಾ + ಆಕೃತಿಮಾ + ಪ್ರತ್ಯಯ + ವಾರ್ಗಿಕ> ಸ್ಥಳನಾಮ

ಚಿಕ್ಕ + ಓಬ + ನ + ಹಳ್ಳಿ > ಚಿಕ್ಕೋಬನಹಳ್ಳಿ

ಒಟ್ಟಿನಲ್ಲಿ ನಿರ್ದಿಷ್ಟ ಹಾಗೂ ವಾರ್ಗಿಕದ ಮೂಲವನ್ನು ಮತ್ತು ಅರ್ಥವನ್ನು ಹೇಳುವುದಾದರೆ, ಸ್ಥಳನಾಮ ನಿಷ್ಪತ್ತಿಯ ಕೆಲಸ ಬಹುತೇಕ ಪೂರ್ಣಗೊಂಡಂತೆಯೇ ವಾರ್ಗಿಕವನ್ನು ಪತ್ತೆ ಹಚ್ಚುವುದು, ಅರ್ಥ ಹೇಳುವುದು ನಿರ್ದಿಷ್ಟದಷ್ಟು ಕಷ್ಟವಾಗಲಾರದು. ಏನೇ ಆಗಿರಲಿ, ಎರಡೂ ಘಟಕಗಳನ್ನು ಹೇಳಿ ಅರ್ಥೈಸಿದರೆ ಸ್ಥಳನಾಮದ ನಿಷ್ಪತ್ತಿ ಮಾಡಿದಂದಾಗುತ್ತದೆ.

## ಸ್ಥಳನಾಮಗಳಲ್ಲಿ ಭಾಷೆಯ ಚಾರಿತ್ರಿಕ ಬೆಳವಣಿಗೆ

ಮೊಳಕಾಲ್ಮೂರು ತಾಲ್ಲೂಕಿನ ಇತಿಹಾಸವು ಬಹಳ ಪ್ರಾಚೀನವಾದುದು. ಪೂರ್ವ ಶಿಲಾಯುಗದಿಂದಲೂ ಜನವಸತಿ ಇತ್ತೆಂಬುದಕ್ಕೆ ಈ ತಾಲ್ಲೂಕಿನ ಹಲವು ಭಾಗಗಳಲ್ಲಿ ದೊರೆತಿರುವ ಬೃಹತ್ ಶಿಲಾ ಸಮಾಧಿಗಳು, ಇತರ ಪ್ರಾಚೀನ ಅವಶೇಷಗಳು ಹಾಗೂ ಬ್ರಹ್ಮಗಿರಿಯಲ್ಲಿ ನಡೆದಿರುವ ಉತ್ಖನನಗಳಿಂದ ಸ್ವಯಂವೇದ್ಯವಾಗಿದೆ.

ಇಲ್ಲಿನ ಇತಿಹಾಸವನ್ನು ಕ್ರಿ.ಪೂ. ೨ನೇ ಶತಮಾನದಿಂದಲೂ ಗುರುತಿಸಬಹುದು. ಈ ಪ್ರದೇಶವು ಮೌರ್ಯ ಸಾಮ್ರಾಜ್ಯಕ್ಕೆ ಸೇರಿತ್ತು ಎಂಬುದು ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗಿ ರಾಮೇಶ್ವರಗಳಲ್ಲಿ ದೊರೆತಿರುವ ಅಶೋಕನ ಶಾಸನಗಳಿಂದ ವ್ಯಕ್ತವಾಗುತ್ತದೆ. ಬ್ರಹ್ಮಗಿರಿಯ

ಸುತ್ತಮುತ್ತ ವಿಸ್ತಾರವಾದ ಭೂಶೋಧನೆ ನಡೆದು ಈ ತಾಲ್ಲೂಕಿನ ಪ್ರಾಕ್ತನ ಸಂಸ್ಕೃತಿಯ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವಂತಾಗಿದೆ. ಬ್ರಹ್ಮಗಿರಿಯಲ್ಲಿ ನಡೆದ ಉತ್ಸವದಲ್ಲಿ ಕೆಲವು ಬಗೆಯ ಸಂಸ್ಕೃತಿಗಳು ಕಂಡುಬಂದಿವೆ. ಅತ್ಯಂತ ಪ್ರಾಚೀನವಾದ ನವಶಿಲಾಯುಗದ ಸಂಸ್ಕೃತಿ, ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿ, ದಪ್ಪ ಗುಂಡುಗಳನ್ನು ದಂಡೆಗೆ ಜೋಡಿಸಿ, ಕಲ್ಲಿನ ಶವಪೆಟ್ಟಿಗೆಯಲ್ಲೋ, ಆಳವಾದ ಕುಳಿಯಲ್ಲೋ, ಹಲವಾರು ಬಗೆಯ ಹೊಳಪಿನ ಮಡಕೆಗಳನ್ನು ಕಬ್ಬಿಣದ ಆಯುಧಗಳನ್ನಿಟ್ಟು ವಿಶಿಷ್ಟವಾಗಿ ನಡೆಸುತ್ತಿದ್ದ ಶವಸಂಸ್ಕಾರ ಪದ್ಧತಿ ಈ ಸಂಸ್ಕೃತಿಯ ಹೆಗ್ಗುರುತು. ಬ್ರಹ್ಮಗಿರಿಯಲ್ಲಿ ಇಂತಹ ಬೃಹತ್ ಶಿಲಾಸಮಾಧಿಗಳು ದೊರೆತಿವೆ. ಅಶೋಕ ಚಕ್ರವರ್ತಿಯು ತನ್ನ ಶಾಸನಗಳಲ್ಲಿ ಹೇಳಿಕೊಂಡಿರುವಂತೆ ಮಾನವ ಹಾಗೂ ಪ್ರಾಣಿಗಳ ಆರೋಗ್ಯ ರಕ್ಷಣೆಗೆ ತಕ್ಕ ವ್ಯವಸ್ಥೆ ಮಾಡಿದ್ದು, ಜೊತೆಗೆ ಅನೇಕ ಸನ್ಯಾಸಿ ಮಠಗಳು ಮತ್ತು ದೇವಾಲಯಗಳು ಒಂದು ಭವ್ಯವಾದ ಅರಮನೆಯನ್ನು ಸಹ ಕಟ್ಟಿಸಿದನೆಂದು ಪರಂಪರಾನುಗತವಾಗಿ ಬಂದ ದಾಖಲೆಗಳು ತಿಳಿಸುತ್ತವೆ. ಉದಾಹರಣೆಗೆ ಬ್ರಹ್ಮಗಿರಿ ಬೆಟ್ಟದಲ್ಲಿ ಒಂದು ಅರಮನೆಯನ್ನು ಕಾಣಬಹುದು. ಇದನ್ನು ಈಗ ಮಠ ಎಂದು ಕರೆಯುವುದು ವಾಡಿಕೆಯಾಗಿದೆ. ಈ ಮಠದ ಮುಂದೆ ತ್ರಿಶಂಕೇಶ್ವರನೆಂಬ ಹೆಸರಿನ ದೇವಾಲಯವಿದೆ. ಈ ದೇವಾಲಯದ ಶಾಸನದಿಂದ ಇದು ಪೂರ್ವದಲ್ಲಿ ಜೈನರ ರಾಜಧಾನಿಯಾಗಿತ್ತು ಎಂಬುವುದು ತಿಳಿಯುತ್ತದೆ. ಇದಾದ ನಂತರ ಇತಿಹಾಸ ಆರಂಭಕಾಲದ ನಾಗರೀಕತೆಯನ್ನು ಗುರುತಿಸಲಾಗಿದೆ. ಕ್ರಿ.ಪೂ. ೨ನೇ ಶತಮಾನದಲ್ಲಿ ಆರಂಭವಾದ ಈ ಸಂಸ್ಕೃತಿಯಲ್ಲಿ ಇಟ್ಟಿಗೆ ಕಟ್ಟಡಗಳನ್ನು ಕಟ್ಟಿರುವುದನ್ನು ಕಾಣಬಹುದು. ಬ್ರಹ್ಮಗಿರಿ ಬೆಟ್ಟದ ಇಳಿಜಾರಿನಲ್ಲಿ ಕಟ್ಟಿರುವ ಚೈತ್ಯಾಕಾರದ ಕಟ್ಟಡ ಇವುಗಳಲ್ಲಿ ಮುಖ್ಯವಾದದ್ದು. ಮೊಳಕಾಲ್ಮೂರು ತಾಲ್ಲೂಕಿನ ಸುತ್ತಮುತ್ತಲಿನ ಪ್ರದೇಶವು ಚಿಕ್ಕ ಚಿಕ್ಕ ಮೌರ್ಯರ ಮನೆಗಳನ್ನು ಕಾಣಬಹುದು. ನೀಲಗಿರಿಯ ಬಡಗರ ಮೌರ್ಯರ ಮನೆಗಳೆಂದು ಕರೆಯುತ್ತಾರೆ. ಇವುಗಳನ್ನು ಪೂರ್ವಕಾಲೀನರು ಇವುಗಳನ್ನು ಭೂಮ್ಯಂತರ್ಗತಗಳನ್ನಾಗಿ ಮಾಡುತ್ತಿದ್ದುದರ ಸ್ಮಾರಕಗಳೆಂದು ನಿಸ್ಸಂದೇಹವಾಗಿ ಹೇಳಬಹುದು. ಬ್ರಹ್ಮಗಿರಿ, ಸಿದ್ಧಾಪುರ, ಜಟಂಗಿ ರಾಮೇಶ್ವರಗಳಲ್ಲಿ ದೊರೆತಿರುವ ಶಾಸನಗಳನ್ನು ಆಳವಾಗಿ ದಪ್ಪವಾಗಿ ಬ್ರಾಹ್ಮಿ ಲಿಪಿ ಮತ್ತು ಪ್ರಾಕೃತ, ಖರೋಷ್ಠಿ ಮತ್ತು ಪಾಳಿ ಭಾಷೆಯಲ್ಲಿ ಕೆತ್ತಿಸಿದ್ದಾರೆ. ಈ ಶಾಸನಗಳು 'ಇಸಿಲಾ' ಪಟ್ಟಣದ ಬಗ್ಗೆ ಬೆಳಕನ್ನು ಚೆಲ್ಲುತ್ತವೆ."[೪]

ಮೊಳಕಾಲ್ಮೂರು ಬೆಟ್ಟದಲ್ಲಿ ಕದಂಬ ದೊರೆಗಳು ಕಟ್ಟಿಸಿದ ಕೋಟೆಯನ್ನು 'ನುಂಕೆ ಕೋಟೆ' ಎಂದು ಹೆಸರಾಗಿದೆ. ಜಟಂಗಿ ರಾಮೇಶ್ವರ ಬೆಟ್ಟದ ಮೇಲೆ ಎತ್ತರದ ಬಂಡೆಯ ಕೆಳಗೆ ಇರುವ ತಣ್ಣೀರು ದೋಣಿಯ ಬಳಿ ಶ್ರೀರಾಮನು ಜಟಾಯುವಿಗೆ ಅಗ್ನಿ ಸಂಹಾರ ಮಾಡಿದನೆಂಬ ಹೇಳಿಕೆ ಉಂಟು. ಅನಂತರ ಕೆಲವು ದಿನ ಅಲ್ಲಿ ಏಕಾಂತವಾಗಿ ತಂಗಿದ್ದರಿಂದ ಅದಕ್ಕಾಗಿ ಆ ದೋಣಿ 'ಏಕಾಂತ ತೀರ್ಥ'ವೆಂದು ಹೆಸರಾಗಿದೆ ಎಂದು ಐತಿಹ್ಯವಿದೆ.

ಬುದ್ಧನಿಗೆ ಏಕಾಂತನೆಂದು ಹೆಸರಿದ್ದು, ಬೌದ್ಧರು ನೆಲೆಸಿದ ಸ್ಥಳವಾದ್ದರಿಂದ ಏಕಾಂತ ತೀರ್ಥ ಹೆಸರು ಬಂದಂತೆ ಕಾಣುತ್ತದೆ. ಈ ಬೆಟ್ಟದ ಮೇಲೆ 'ಸೀತಾದೋಣಿ' ಎಂಬ ನೀರಿನ ದೋಣಿ ಇದೆ. ಈ ಪ್ರದೇಶದಲ್ಲಿ ಅಕ್ಷರಗುಂಡು, ಎಮ್ಮೆ ತಮ್ಮನ ಗುಂಡು ಹಾಗೆ ಬಳೆಗಾರರ ಗುಂಡು ಎಂಬ ಮೂರು ಬಂಡೆಗಲ್ಲು ಶಾಸನಗಳು ಲಭ್ಯವಾಗಿವೆ. ಇವು ಬೌದ್ಧ ಧರ್ಮದ ಕುರುಹುವಿಗೆ ಸಾಕ್ಷಿಯಾಗಿವೆ. ಇಂತಹ ಚಾರಿತ್ರಿಕ ಪರಿಸರದಲ್ಲಿ ಈ ತಾಲ್ಲೂಕು ಪ್ರಸಿದ್ಧವಾಗಿದೆ. ಮೊಳಕಾಲ್ಮೂರು ಪ್ರದೇಶವನ್ನು ಶಾತವಾಹನರು ಆಳ್ವಿಕೆ ಮಾಡಿದರು. ಅಲ್ಲದೆ ಈ ಪ್ರದೇಶವು ರಾಷ್ಟ್ರಕೂಟರ ಆಳ್ವಿಕೆಗೆ ಸೇರಿತ್ತು. ೧೦ನೇ ಶತಮಾನದಲ್ಲಿ ನೊಳಂಬವಾಡಿ ೩೨೦೦೦ ಸೀಮೆಯಲ್ಲಿ ಸೇರ್ಪಡೆಗೊಂಡಿತ್ತು. ತದನಂತರ ಕಲ್ಯಾಣಿ ಚಾಲುಕ್ಯರ, ಹೊಯ್ಸಳರ ಹಂಗೂ ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಮುಂದೆ ಇದು ರಾಮದುರ್ಗದ ಪಾಳೆಯಗಾರರ ಆಡಳಿತಕ್ಕೆ ಸೇರಿತು. ಹಟ್ಟಿಯ ಪಾಳೆಗಾರರ ಮಲ್ಲಪ್ಪ ನಾಯಕನು ಈ ಪ್ರದೇಶವನ್ನು ರಾಯದುರ್ಗದ ಬೊಮ್ಮನಾಯಕನಿಗೆ ೨೦೦೦ ಕಪ್ಪು ಹಸುಗಳನ್ನು ೧೦೦೦ ಬಿಳಿ ಹಸುಗಳನ್ನು ಕೊಟ್ಟು ಪಡೆದುಕೊಂಡು ಇಲ್ಲಿ ಬೆಟ್ಟದ ಮೇಲ್ಮೈ ಕೋಟೆ ಹಾಗೂ ಸರೋವರಗಳನ್ನು ಕಟ್ಟಿಸಿದರು. ಮುಂದೆ ಇದು ಬಿಚ್ಚುಗತ್ತಿ ಭರಮಣ್ಣ ನಾಯಕನ ಕಾಲದಲ್ಲಿ (ಕ್ರಿ.ಶ. ೧೬೮೯–೧೭೨೧) ಚಿತ್ರದುರ್ಗದ ಪಾಳೆಗಾರರ ಆಳ್ವಿಕೆಯಲ್ಲಿ ಲೀನವಾಯಿತು. ಅನಂತರ ಹೈದರ್, ಟಿಪ್ಪು, ಬ್ರಿಟಿಷರ, ಮೈಸೂರು ಒಡೆಯರ ಆಳ್ವಿಕೆಗೆ ಒಳಗಾಗಿ ೧೮೮೬ರಲ್ಲಿ ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಗೆ ಮೊಳಕಾಲ್ಮೂರು ಪ್ರದೇಶವು ಸೇರಿತು.

ಶಾಸನಗಳಲ್ಲಿ ಉಕ್ತವಾಗಿರುವ ಸ್ಥಳನಾಮಗಳನ್ನು ಅನುಲಕ್ಷಿಸಿ, ಭಾಷೆಯ ಚಾರಿತ್ರಿಕ ಬೆಳವಣಿಗೆಯನ್ನು ಗುರುತಿಸಬಹುದು. ಆಯಾ ಕಾಲದಲ್ಲಿ ಬದಲಾದ ಭಾಷೆಯು ಸಹಜವಾಗಿ ಸ್ಥಳನಾಮಗಳ ಮೇಲೆಯೂ ಪ್ರಭಾವ ಬೀರಿರುವುದನ್ನು ಇಲ್ಲಿ ಶಾಸನಗಳಿಂದ ತಿಳಿಯುತ್ತದೆ. ಭಾಷೆಯ ಚಾರಿತ್ರಿಕ ಬೆಳವಣಿಗೆಯ ಅಧ್ಯಯನದಲ್ಲಿ ಈ ರೀತಿ ಮಾದರಿಯೂ ಕೂಡ ಪ್ರಮುಖವೆಂದು ತಿಳಿಯಬಹುದು. ಇದಕ್ಕೆ ಉದಾಹರಣೆಯಾಗಿ ಕೆಲವು ಅಂಶಗಳನ್ನು ನೋಡಬಹುದು.

೧. ಶಕಟರೇಫ ಮತ್ತು ರಳ: ಹಳಗನ್ನಡ ಭಾಷೆಯಲ್ಲಿ ಕಾವ್ಯದಲ್ಲಿ ಬಳಕೆಯಾಗಿರುವ ರಳ, ಕಾರಗಳು ಶಾಸನಗಳಲ್ಲಿಯೂ ಬರೆಯಲ್ಪಟ್ಟಿವೆ. ಉದಾ. ಪೊಕ್ಕುರಿಕೆ – ೧೫೫೬ – ಪೊಕ್ಕುವಿಕೆ.

೨. ಪ>ಹ ಬದಲಾವಣೆ: ಶಾಸನೋಕ್ತ ಸ್ಥಳನಾಮಗಳಲ್ಲಿ 'ಪ' ಕಾರವು ಮೊದಲು ಬಳಕೆಯಾಗಿದ್ದು, ಅದು ನಂತರದ ಅವಧಿಯಲ್ಲಿ 'ಹ' ಕಾರವಾಗಿರುವುದು ಶಾಸನಗಳಿಂದ ತಿಳಿಯುತ್ತದೆ. ಉದಾ. ಪೆರೂರಹಳ್ಳಿ (ಹೆರೂರಹಳ್ಳಿ) ಕಿ.ಶ. ೯೮೧

೩. ಲ>ನ ಬದಲಾವಣೆ: ಶಾಸನದಲ್ಲಿ ಉಕ್ತವಾದ 'ನ' ಕಾರದ ಸ್ಥಾನದಲ್ಲಿ 'ಲ' ಕಾರವು ಬಳಕೆಯಾದ ಬಗೆಗೆ ಮಾಹಿತಿಗಳಿವೆ. ಉದಾ. ಲುಂಕಪ್ಪ – ನುಂಕಪ್ಪ.

ಹೀಗೆ ಒಂದು ಭಾಷೆಯಲ್ಲಿ ಚಾರಿತ್ರಿಕ ಅಂಶಗಳಿಂದ ಅದರ ಬೆಳವಣಿಗೆಯ ಹಂತಗಳನ್ನು ಸ್ಥಳನಾಮಗಳ ಮೂಲಕ ತಿಳಿಯಬಹುದು. ಬಹುಮುಖ್ಯವಾಗಿ ಇಲ್ಲಿ ಚರ್ಚಿಸಿದ ಶಾಸನೋಕ್ತ ಸ್ಥಳನಾಮಗಳಲ್ಲಿ ಶಕಟರೇಪ, ರಳ, ಪ>ಹ, ಲ>ನ, ಧ್ವನಿ ಬದಲಾವಣೆ ಬಳಕೆಯ ಇತ್ಯಾದಿಯಿಂದ ಕ್ರಮೇಣ ಭಾಷೆಯು ಬೆಳೆಯುತ್ತಾ ಸ್ಥಳನಾಮಗಳಲ್ಲಿ ಪ್ರಯೋಗವಾದುದನ್ನು ಗಮನಿಸಿ ಅದರ ಸ್ಥಿತ್ಯಂತರ ಅವಸ್ಥಾಂತರಗಳನ್ನು ಚಾರಿತ್ರಿಕವಾಗಿ ಗುರುತಿಸಬಹುದು. ಈ ಕಾರಣದಿಂದ ಶಾಸನೋಕ್ತ ಸ್ಥಳನಾಮಗಳಲ್ಲಿ ಭಾಷೆಯ ಚಾರಿತ್ರಿಕ ಬೆಳವಣಿಗೆಯನ್ನು ಸಮಗ್ರ ಅಧ್ಯಯನಕ್ಕೆ ತೆಗೆದುಕೊಳ್ಳುವ ಅಗತ್ಯವೂ ಇದೆಯೆನ್ನಬಹುದು.

**೫.೨. ಸ್ಥಳನಾಮ ನಿಷ್ಪತ್ತಿಯ ವಿವರಗಳು**

೧. ಆವಿನಮೊಡು[೧] > ಆವಿನ ಮಡು (ಪ್ರಾಣಿವಾಚಕ) : ಮೊಡು>ಮಡು, ಒ>ಉ ಕಾರಣವಾಗಿದೆ.

ಆವಿನ>ಹಾವಿನ ಆಗಿರುವ ಸಾಧ್ಯತೆಗಳೂ ಇರಬಹುದು.

ಆವಿ(ನಾ): ೧. (ನೀರಿನ) ಹಬೆ: ಉಗಿ ೨. ಕಾವು ೩. ಹೆಂಚು, ಮಡಿಕೆಗಳನ್ನು ಸುಡುವ ಒಲೆ: ಕುಲುಮೆ, ೪. ಚಿಗಟ: ಚಿಕ್ಕಾಡು (ಸಂಕನಿ, ಪು–೯೦)

ಮಡಿಕೆ, ಹೆಂಚು ಮುಂತಾದವುಗಳನ್ನು ಸುಡುವ ಒಲೆಗಳು ಇದ್ದುದರಿಂದ ಆವಿನ ಮಡು ಎಂದು ಹೆಸರಾಗಿರಬಹುದು.

೨. ಉರುತಳ[೨] > ಉರ್ಥಾಳ್ (ವಲಸೆಗೆ ಸಂಬಂಧಿಸಿದ) ಉರ್ಥಾಳ್ ವ್ಯಂಜನಾಂತ್ಯ ಪದವಾಗಿದೆ. ಇದನ್ನು ಉರುತಳ ಎನ್ನುತ್ತಾರೆ.

ಉರು(ನಾ): ೧. ಕಂಠಪಾಠ ಮಾಡುವುದು: ಗಟ್ಟಿಮಾಡುವುದು (ಗು)

೨. ವಿಶೇಷವಾದ: ಹೆಚ್ಚಿನ

೩. ವಿಸ್ತಾರವಾದ

೪. ಶ್ರೇಷ್ಠವಾದ: ಅಮೋಘವಾದ (ಸಂಕನಿ ಪು–೧೨೦)

ತಳ: ೧. ಸಮತಟ್ಟಾದ ಪ್ರದೇಶ

೨. ಅಂಗೈ, ೩. ಅಂಗಾಲು, ೪. ಕೆಳಭಾಗ: ಅಡಿ, ೫. ಕಾರಣ: ಮೂಲ, ೬. ತಾಳೀಮರ: ಪನೆ, ೭. ಸ್ಥಳ: ಊರು (ಸಂಕನಿ, ಪು. ೪೦೨)

ಮೊಳಕಾಲ್ಮೂರು ತಾಲ್ಲೂಕಿನ ಅತಿ ಚಿಕ್ಕ ಹಳ್ಳಿ. ಬೇರೆ ಕಡೆಯಿಂದ ವಲಸೆ ಬಂದಿದ್ದ ಜನರು ತಳವನ್ನು ಊರಿದ್ದರಿಂದ 'ಉರುತಳ' ಉರ್ಥಾಳ್ ಆಗಿದೆ.

೩. ಕಣಿಯಕಲು[೩] > ಕೆಳಗಿನ ಕಣಿವೆ (ಶಿಲಾವಾಚಕ)

ಕಣಿಯಕಲು ಎನ್ನುವುದನ್ನು ಅನುಕೂಲಕ್ಕಾಗಿ ಕೆಳಗಿನ ಕಣಿವೆ ಎಂದು ಮಾಡಿಕೊಂಡಿದ್ದಾರೆ. ಎತ್ತರದ ಮಟ್ಟಿಯ ತುದಿಯ ತಗ್ಗಿನಲ್ಲಿರುವ ಗ್ರಾಮವಾದುದರಿಂದ ಕೆಳಗಿನ ಕಣಿವೆ ಎಂದಾಗಿದೆ.

ಕಣಿವೆ-ಎರಡು ಬೆಟ್ಟಗಳ ನಡುವಿನ ಇಕ್ಕಟ್ಟಾದ ಆಳವಾದ ಪ್ರದೇಶ. (ಸಂಕನಿ, ಪು-೧೬೫)

೪. ಕೋನಸಾಗರ>ಕೋನಸಾಗರ[೪] > ಕೋಣಸಾಗರ (ವ್ಯವಾ) ನ>ಣ ಆಗಿದೆ.

ಕೋನ ಮಹಾರಾಜ್ಯ ಎನ್ನುವ ವ್ಯಕ್ತಿಯ ಹೆಸರಿನಲ್ಲಿ ಆ ಊರಿಗೆ ಕೋನಸಾಗರ ಎಂದು ಹೆಸರು ಬಂದಿದೆ. ಊರಿನ ಹತ್ತಿರ ಸಾಗರ ಇರುವುದರಿಂದ ಕೋನಸಾಗರವಾಗಿದೆ. ಸ್ಥಳೀಕರು ಆಡುವ ಮಾತಿನ ರೂಪ ಕ್ವಾಣಾಸಾಗ್ರ ಎಂದು ಉಚ್ಚರಿಸುತ್ತಾರೆ.

೫. ಗುಡ್ಲಹಳಿ[೫] > ಗುಡ್ಡದಹಳ್ಳಿ (ಶಿವಾ)

ಗುಡ್ಲು ಎಂದರೆ ತೆಂಗಿನಗರಿಯನ್ನು ಹಾಕಿ ಮಾಡಿದ ಗುಡಿಸಲು ಎಂದು ಅರ್ಥ. ಅಂತಹ ಗುಡಿಸಲುಗಳು ಬಹಳ ಇದ್ದುದರಿಂದ ಗುಡ್ಲಹಳಿಯಾಗಿದ. ಅನಂತರ ಗುಡಿಸಲುಗಳು ಇಲ್ಲವಾಗಿ ಮಣ್ಣು ಮತ್ತು ಕಲ್ಲುಗಳಿಂದ ಮನೆ ನಿರ್ಮಿಸಿಕೊಂಡಿರಬಹುದು. ಆಗ ಅದು ಗುಡ್ಡದ ಬದಿಯಲ್ಲಿ ಹಳ್ಳಿಯಾದ್ದರಿಂದ ಗುಡ್ಡದಹಳ್ಳಿಯಾಗಿದೆ.

೬. ಚಾಮಗೊಂಡನಹಳ್ಳಿ[೬] > ಮಾಚೇನಹಳ್ಳಿ (ವ್ಯವಾ)

ಸಿದ್ದಾಪುರದಿಂದ ೪ ಮೈಲಿ ದೂರದಲ್ಲಿರುವ ಗ್ರಾಮ ಆಂಧ್ರದ ಗಡಿಭಾಗದಲ್ಲಿದೆ. ಮಾಚ ಎನ್ನುವ ಗೌಡ ಅಥವಾ ಗಾಮುಂಡನ ಹೆಸರಿನಲ್ಲಿದೆ. ಮಾಚಗೌಡ ಎನ್ನುವವನು ಎಲ್ಲರ ಪ್ರೀತಿಗೆ ಪಾತ್ರನಾದ ವ್ಯಕ್ತಿಯಾದ್ದರಿಂದ ಅವನ ಹೆಸರನ್ನು ಈ ಗ್ರಾಮಕ್ಕೆ ಇಡಲಾಗಿದೆ.

೭. ಜಂಲಕೆಯಗ್ರಾಮ> ಜಂಬುಲಮುಲಿಕೆ೭ > ಜಂಬಾಳಮಲ್ಕಿ (ನಿ.ವಾ)

ಜಂಲಕೆ>ಜಂಬುಲ>ಜಂಬಾಳ 'ಕೆ' ಎನ್ನುವುದು ಲೋಪವಾಗಿದೆ. 'ಬ' ಕಾರ ಆದೇಶವಾಗಿ ಬಂದಿದೆ. ಮಲಿಕೆ>ಮಲ್ಕಿ ಆಗಿದೆ.

ಜಂಬಾಳ: (ನಾ) ೧. ಕೆಸರು: ಬದಿ:ರಾಡಿ, ೨. ಪಾಚಿ: ಹಾವಾಸೆ

ಮಲಕು: ೧. ಬಗ್ಗು: ಮಣೆ, ೨. ತಿರುವು ಬಾಗಿಸು: ತಿರುಚು (ಸಂಕನಿ. ಪು-೬೫೫)

ಜಂಬಾಳ ಸದಾ ನೀರು ಹರಿಯುವ ಸ್ಥಳವಾಗಿದ್ದು, ಅದು ಪಾಚಿಕಟ್ಟಿರುತ್ತದೆ. ಈ ಪ್ರದೇಶದ ತಿರುವಿನಲ್ಲಿ ಊರು ಕಟ್ಟಿದ್ದರಿಂದ ಜಂಬಾಳಮಲ್ಕಿ ಎಂದು ಹೆಸರಾಗಿದೆ.

೮. ಜೀಯರಹಳ್ಳಿ[೮] > ರಾಮಸಾಗರ (ಸವಾ/ವ್ಯವಾ)

ಜೀಯರಹಳ್ಳಿ ಎಂಬುದು ಶಾಸನೋಕ್ತ ಸ್ಥಳನಾಮ (ಹೂಗಾರರ ವಾಸಸ್ಥಾನ). ಇದು ಈಗ ರಾಮಸಾಗರ ಎಂದು ಬಳಕೆಯಾಗುತ್ತದೆ. ಸೌಲಭ್ಯಕಾಂಕ್ಷೆಯ ಕಾರಣಕ್ಕಾಗಿ ಆದ ಭಾಷಿಕ ಬದಲಾವಣೆ ಹಾಗಾಗಿ ಇದು ಅನುದ್ದೇಶಿತ ಬದಲಾವಣೆ.

೯. ದೇವಸಮುದ್ರ[೯] > ದೇವಸಮುದ್ರ (ದೈವಾ/ಜವಾ)

ದೇವರ ಹೆಸರಿನಲ್ಲಿ ಸಮುದ್ರ ಅಥವಾ ಸಾಗರವನ್ನು ಕಟ್ಟಿಸಿದ್ದರಿಂದ ದೇವಸಮುದ್ರವಾಗಿದೆ. ಮೊಳಕಾಲ್ಮೂರು ತಾಲ್ಲೂಕಿನ ಮಂಡಲ ಪಂಚಾಯ್ತಿಯನ್ನು ಹೊಂದಿರುವ ಗ್ರಾಮವಾಗಿದೆ.

೧೦. ಬಾಣರಾವಿ[೧೦] > ಬಾಂಡ್ರಾವಿ>ಬಂದ್ರವಿ (ಸವಾ)

ಬಾಣರಾ> ಬಾಂಡ್ರಾ>ಬಂದ್ರ, ಭಾಷೆಯು ಯಾವ ರೂಪದಲ್ಲಿ ಸಂಕ್ಷಿಪ್ತವಾಗುತ್ತಾ ಬಂದಿದೆ ಎಂಬುವುದನ್ನು ಗಮನಿಸಬಹುದು.

ಬಾಣ(ನಾ): ೧. ಬಿಲ್ಲಿಗೆ ಹೂಡಿ ಬಿಡುವ ಅಸ್ತ್ರ: ಅಂಬು: ಕಣೆ, ೨. ಶಬ್ದ: ಸದ್ದು, ೩. ನೀಲಿಗೋರಂಟಿಗಿಡ (ಸಂಕನಿ, ಪು-೮೭೪)

ರಾವಾ(ನಾ): ೧. (ಪ್ರಾಣಿಗಳ) ಕೂಗು: ಅರಚಾಟ, ೨. ಶಬ್ದ: ಸದ್ದು: ಧ್ವನಿ (ಸಂಕನಿ, ಪು-೯೭೦)

ಬಾಂಡ್ರಾವಿ ಫಾರೆಸ್ಟ್ ಇರುವುದರಿಂದ, ನೀಲಿಗೋರಂಟಿಗಿಡ ಮತ್ತು ಪ್ರಾಣಿಗಳ ಕೂಗಾಟ, ಅರಚಾಟದಿಂದ ಬಾಣರಾವಿ ಎಂದು ಹೆಸರಿಸಬಹುದು.

೧೧. ಬುಡುಸುಗೊಂಡನಹಳಿ> ಬನವಿಗೊಂಡನಹಳ್ಳಿ[೧೧] > ಬೊಮ್ಮಗೊಂಡನಹಳ್ಳಿ (ವ್ಯವಾ): ಬುಡುಸು> ಬನವಿ> ಬೊಮ್ಮ ಆಗಿ ರೂಪುಗೊಂಡಿದೆ. ಮೊಳಕಾಲ್ಮೂರು ತಾಲ್ಲೂಕಿನ ಬೊಮ್ಮನಗೌಡ ಎನ್ನುವವನು ಇಲ್ಲಿ ಕೆರೆ ಕಟ್ಟಿಸಿದ್ದರಿಂದ ಬೊಮ್ಮಗೊಂಡನ ಕೆರೆಯಾಗಿದೆ. ಈಗ ಚಿಕ್ಕದಾಗಿ ಬಿ.ಜಿ. ಕೆರೆ ಎಂಬುದಾಗಿ ಕರೆಯುತ್ತಾರೆ.

೧೨. ಬೊಂಮಲಗೊಂಡ ಲಿಂಗಮನಹಳ್ಳಿ[೧೨] > ಬೊಮ್ಮಲಿಂಗನಹಳ್ಳಿ (ವ್ಯವಾ)

ಬೊಂಮ> ಬೊಮ್ಮವಾಗಿದೆ. ಸ್ವರ ವ್ಯತ್ಯಾಸವಾಗಿಲ್ಲ. ಬರವಣಿಗೆಯ ರೂಪ ಬದಲಾಗಿದೆ. ಲಗುಂಡ> ಯ ಇವುಗಳು ಲೋಪವಾಗಿವೆ.

ಬೊಮ್ಮಲಿಂಗ ಎನ್ನುವವನು ಆ ಊರಿನ ಮುಖ್ಯಸ್ಥನೋ, ಅಧಿಕಾರಿಯೋ ಆಗಿರಬಹುದು. ಆದ್ದರಿಂದ ಬೊಮ್ಮಲಿಂಗನಹಳ್ಳಿ ಎಂದು ಹೆಸರಾಗಿದೆ.

೧೩. ಮುರವಡಿ> ಮುರವಡಿಪುರ[೧೩] > ಮುರಡಿ (ವೈವಾ)

ವ ಕಾರ ಲೋಪವಾಗಿದೆ. ಮುರವಡಿ ಇದ್ದುದು ಪ್ರಸ್ತುತ ಮುರಡಿ ಆಗಿದೆ.

ಮುರ: ಬಾಗಿಸಿ ಮಾಡಿರುವ ಲೋಹದ ತಂತಿ (ಸಂಕನಿ, ಪು-೧೦೩೨)

ವಡಿ(ನಾ): ೧. ಬಿಸಿ: ಉಷ್ಣ, ೨. ಒಂದು ಬಗೆಯ ಬಾಗಿದ ಕತ್ತಿ (ಸಂಕನಿ, ಪು–೧೧೨೬)

ಮುರಡಿ ಆಂಜನೇಯ ದೇವಸ್ಥಾನವಿರುವುದರಿಂದ ಮುರವಡಿ> ಮುರಡಿ ಆಗಿದೆ.

೧೪. ರಾಮಸಾಗರ[೧೪] > ರಾಮಸಾಗರ (ವ್ಯನಾ/ದೈವಾ)

ರಾಮ: ದಶರಥನ ಮಗ: ಶ್ರೀರಾಮನ, ಕೆರೆಯಿದ್ದು, ಕೆರೆಯ ಪಕ್ಕದಲ್ಲಿ ರಾಮದೇವರ ದೇವಸ್ಥಾನವಿರುವುದರಿಂದ ರಾಮಸಾಗರವಾಗಿದೆ.

೧೫. ರೊಪ್ಪ[೧೫] (ವಸೂ)

ರಪ್ಪ: ರೊಪ್ಪವಾಗಿದೆ.

ರೊಪ್ಪ(ನಾ): ೧. ಕುರಿ, ಹಂದಿ ಮುಂತಾದವುಗಳನ್ನು ಕೂಡುವ ಜಾಗ: ದೊಡ್ಡಿ. ೨. ದನ, ಕುರಿಗಳ ಕೊಟ್ಟಿಗೆಯ ಬಳಿ ಕಾವಲ ಜನ ಹಾಕಿಕೊಂಡ ಕೆಲವು ಮನೆಗಳ ಗುಂಪು (ಸಂಕನಿ, ಪು–೧೧೦೨)

ಬುಡುಕಟ್ಟು ಸಮುದಾಯದ ಜನರು ಪಶುಪಾಲನೆಯಲ್ಲಿ ತೊಡಗಿದ್ದುದರಿಂದ ದನಕರುಗಳನ್ನು ಕೂಡುವ ಜಾಗಕ್ಕೆ ರೊಪ್ಪ ಎಂದು ಕರೆಯುವರು.

೧೬. ಹಿರಿಯರೆಜೆ[೧೬] > ಹಿರೇಕೆರೆಹಳ್ಳಿ (ಜವಾ)

ಹಿರಿಯದಾದ ಕೆರೆಯಿದ್ದು ಅಲ್ಲಿ ಹಳಳಿ ನಿರ್ಮಾಣವಾಗಿರುವುದರಿಂದ ಹಿರೇಕೆರೆಹಳ್ಳಿಯಾಗಿದೆ.

೧೭. ಪೊಕುರಿಕೆ> ಪಕ್ಕುರಿಕೆ[೧೭] > ಪಕ್ಕುರ್ತಿ (ಸವಾ)

ಪೊಕ್ಕು>ಹೊಕ್ಕು: ಒಳ ಹೊಕ್ಕು

ಕುರಿಕೆ ಆಗಿ ಸಂಕ್ಷಿಪ್ತಗೊಂಡಿದೆ.

ಕುರುಕು (ಕ್ರಿ): ೧. ಕೊಂಚ ಕೊಂಚವಾಗಿ ಕಚ್ಚಿ ತಿನ್ನು, ೨. ಮೆಲ್ಲನೆ ಹೇಳು: ಗುಯಿಗುಟ್ಟು

ಸಂಕ೨ – ಪು ಗರಿಕೆ ಹುಲ್ಲಿನಿಂದ ಪಕ್ಕುರ್ತಿ ಹೆಸರು ಬಂದಿರಬಹುದು.

೧೮. ಹೆರೂರಹಳ್ಳಿ[೧೮] > ಪೆರೂರಹಳ್ಳಿ

ಪೆರೂ: ಹೆಳವರು ಆಗಿರಬಹುದು. ಹೆಳವರು ಉಪ್ಪನ್ನು ಮಾರಾಟ ಮಾಡುವ ಒಂದು ಜಾತಿಯವರು. ಇದು ಒಂದು ಜನಾಂಗವನ್ನು ಸೂಚಿಸುತ್ತದೆ. ಇವರ ಊರು ಪೆರೂರ ಆಗಿರುವ ಸಾಧ್ಯತೆಗಳಿವೆ.

**ಅಡಿ ಟಿಪ್ಪಣಿಗಳು**

೧. ಎಫಿಗ್ರಫಿಯ ಕರ್ನಾಟಕ ಮೊಳಕಾಲ್ಮೂರು ಶಾ.ಸಂ–೨೫

೨. ಅದೇ ಮೊಳಕಾಲ್ಮೂರು ಶಾಸನ ಸಂಪುಟ, ಪು–೧

೩. ಅದೇ ಮೊಳಕಾಲ್ಮೂರು ಶಾಸನ ಸಂ–೨೯ (೧೦೬೪)

೪. ಅದೇ ಮೊಳಕಾಲ್ಮೂರು ಶಾಸನ ಸಂ ಪು–೪೫

೫. ಅದೇ ಮೊಳಕಾಲ್ಮೂರು ಶಾ.ಸಂ. ಪು–೨೫

೬. ಅದೇ ಮೊಳಕಾಲ್ಮೂರು ಶಾ.ಸಂ. ಪು–೪೧

೭. ಅದೇ ಮೊಳಕಾಲ್ಮೂರು ಶಾ.ಸಂ. ಪು–೧

೮. ಅದೇ ಮೊಳಕಾಲ್ಮೂರು ಶಾ.ಸಂ. ಪು–೩೧

೯. ಅದೇ ಮೊಳಕಾಲ್ಮೂರು ಶಾ.ಸಂ. ಪು–೧

೧೦. ಅದೇ ಮೊಳಕಾಲ್ಮೂರು ಶಾ.ಸಂ. ಪು–೨೫

೧೧. ಅದೇ ಮೊಳಕಾಲ್ಮೂರು ಶಾ.ಸಂ. ಪು–೨೮ (೧೭೩೮)

೧೨. ಅದೇ ಮೊಳಕಾಲ್ಮೂರು ಶಾ.ಸಂ. ಪು–೨೫

೧೩. ಅದೇ ಮೊಳಕಾಲ್ಮೂರು ಶಾ.ಸಂ. ಪು–೪, (೧೫೫೬)

೧೪. ಅದೇ ಮೊಳಕಾಲ್ಮೂರು ಶಾ.ಸಂ. ಪು–೩೧ (೧೩೮೭)

೧೫. ಅದೇ ಮೊಳಕಾಲ್ಮೂರು ಶಾ.ಸಂ. ಪು–೪೩

೧೬. ಅದೇ ಮೊಳಕಾಲ್ಮೂರು ಶಾ.ಸಂ. ಪು–೩೫ (೧೧೨೪)

೧೭. ಅದೇ ಮೊಳಕಾಲ್ಮೂರು ಶಾ.ಸಂ. ಪು–೧

೧೮. ಅದೇ ಮೊಳಕಾಲ್ಮೂರು ಶಾ.ಸಂ. ಪು–೪೩ (೧೫೫೪)



# ಅಧ್ಯಾಯ: ಆರು

## ಸಮಾರೋಪ

ಸೂಕ್ಷ್ಮ ಹಾಗೂ ತರ್ಕಬದ್ಧವಾದ ವೈಜ್ಞಾನಿಕ ದೃಷ್ಟಿಕೋನದಿಂದ ನಡೆಸಬೇಕಾದ ಅಧ್ಯಯನ ವಿಷಯಗಳಲ್ಲಿ ಸ್ಥಳನಾಮವೂ ಸಹ ಒಂದಾಗಿದೆ. ಸ್ಥಳನಾಮ ಅಧ್ಯಯನವು ಅಪಾರ ಸಾಧ್ಯತೆಯುಳ್ಳ ಬಹುಶಾಸ್ತ್ರೀಯ ಅಧ್ಯಯನವನ್ನು ಅಪೇಕ್ಷಿಸುವ ಮತ್ತು ಹಲವು ಜ್ಞಾನ ಶಿಸ್ತುಗಳಿಗೆ ಪೂರಕವಾದ ಮಾಹಿತಿಯನ್ನು ನೀಡುವ ಅಪೂರ್ವ ಕ್ಷೇತ್ರಗಳಲ್ಲಿ ಒಂದೆಂದು ಪರಿಗಣಿಸಲಾಗಿದೆ.

ಪಶುಪಕ್ಷಿಗಳಂತೆಯೇ ಅಲೆಮಾರಿ ಜೀವನವನ್ನು ನಡೆಸುತ್ತಿದ್ದ ಆದಿಮಾನವನಿಗೆ ಆಹಾರಗಳಿಸುವುದೇ ತನ್ನ ದಿನನಿತ್ಯದ ಕಾರಣವಾಗಿತ್ತು. ಯಾವಾಗ ಸಂಘಜೀವಿಯಾಗಿ, ವ್ಯವಸಾಯವನ್ನು ಕುರಿತು ಒಂದೆಡೆ ಸ್ಥಿರವಾಗಿ ನೆಲೆ ನಿಂತು ಬದುಕಲು ಆರಂಭಿಸಿದಾಗ ಅವರ ವಸತಿಗೊಂದು ಅದರ ಗುರುತಿಗಾಗಿ ಹೆಸರಿಡುವ ಪ್ರಯತ್ನ ಮಾಡಿದರು. ಹೀಗೆ ಸಾಮೂಹಿಕವಾಗಿ ಕಾಲೂರಿದ ಸ್ಥಳಗಳಿಗೆ ಬೆಟ್ಟ, ಗುಡ್ಡ, ನದಿ ಮೊದಲಾದ ಪ್ರಾಕೃತಿಕ ಪರಿಸರದ ಹೆಸರುಗಳನ್ನು ನಾವು ನಿರ್ದೇಶನಕ್ಕೆ ಬಳಕೆ ಮಾಡಿಕೊಂಡರು.

ನಾಮ ಉಲ್ಲೇಖ ವಸ್ತು ವ್ಯವಹಾರ ಹೇತು, ಹೆಸರಿನ ಉಲ್ಲೇಖವೇ ಎಲ್ಲ ವ್ಯವಹಾರಗಳಿಗೂ ಮೂಲಕಾರಣವೆಂದು ಬೃಹಸ್ಪತಿ ಹೇಳುತ್ತಾನೆ. ಆದಿಮಾನವನಿಂದ ಹಿಡಿದು ಇಲ್ಲಿಯವರೆಗೂ ಹೆಸರುಗಳ ಪ್ರಾಮುಖ್ಯತೆಯನ್ನು ಮನಗಂಡ ಮಾನವ, ವ್ಯವಹಾರದ ಅನುಕೂಲತೆಗಾಗಿ ತನ್ನ ಸಂತಾನಕ್ಕೆ ಹೆಸರಿಟ್ಟಂತೆ ತಾನು ತಳವೂರಿದ ಸ್ಥಳಕ್ಕೂ ಹೆಸರಿಟ್ಟನು. ಮೊದಲು ಗ್ರಾಮಗಳಿಗೆ ಪ್ರಾಕೃತಿಕ ಮೂಲದಿಂದ ಬಂದ ಬೆಟ್ಟ, ಗುಡ್ಡ, ಕಲ್ಲು, ಮಣ್ಣು, ಮರಗಿಡ, ನದಿ, ಪ್ರಾಣಿ-ಪಕ್ಷಿಯಂಥ ಪ್ರಕೃತಿನಿಷ್ಠವಾದವುಗಳು ಬಂದರೆ, ನಂತರದಲ್ಲಿ ಸಮುದಾಯ, ವ್ಯಕ್ತಿ, ಐತಿಹ್ಯ ಮತ್ತು ಚಾರಿತ್ರಿಕ ಮೊದಲಾದ ಸಾಂಸ್ಕೃತಿಕ ನಿಷ್ಠ ಘಟನೆಗಳು ಪ್ರೇರಣೆ ನೀಡಿದವು.

ಮೊದಲಿಗೆ ಸಾಂಕೇತಿಕವಾಗಿದ್ದ ಹೆಸರುಗಳು ಬರುಬರುತ್ತಾ ಅರ್ಥಗರ್ಭಿತವಾದವು. ಒಂದು ಪ್ರದೇಶದ ಭಾಷಿಕ, ಆರ್ಥಿಕ, ಧಾರ್ಮಿಕ ಸಾಮಾಜಿಕ, ಭೌಗೋಳಿಕ ಹಾಗೂ ಚಾರಿತ್ರಿಕ

ಸ್ಥಿತಿಗತಿ ಮೊದಲಾದವುಗಳನ್ನು ಪುನರ್ ರಚನೆಗೆ ಸಾಧ್ಯವಾದ ಸರಕನ್ನು ಒದಗಿಸುವ ಮಟ್ಟಕ್ಕೆ ಸ್ಥಳನಾಮಗಳು ಬೆಳೆದು ನಿಂತಿವೆ.

ಸ್ಥಳನಾಮಗಳನ್ನು ಆಳವಾದ ಅಧ್ಯಯನಕ್ಕೆ ಒಳಪಡಿಸುತ್ತಾ ಹೋದಂತೆ, ಅವುಗಳ ಮೂಲ ಏನೆಂಬುದು ಅರಿವಾಗುತ್ತದೆ. ಸ್ಥಳನಾಮ ಕೈಗೊಳ್ಳುವ ವ್ಯಕ್ತಿಯು, ಚಾಣಾಕ್ಷತನದಿಂದ ಕಾರ್ಯ ಕಲಾಪಗಳನ್ನು ಮಾಡುವ ಮತ್ತು ಜಾನಪದ ಸಾಹಿತ್ಯ, ಚರಿತ್ರೆ, ಇತಿಹಾಸ, ಭೌಗೋಳಿಕ ಹಾಗೂ ಭಾಷೆಯನ್ನು ಚೆನ್ನಾಗಿ ಅರಿತುಕೊಂಡಿರಬೇಕು. ಸ್ಥಳನಾಮ ಅಧ್ಯಯನ ಕ್ಷೇತ್ರವು ಸೀಮಿತ ವ್ಯಾಪ್ತಿಯನ್ನು ಒಳಗೊಂಡಿರುವುದಿಲ್ಲ. ಅದು ಒಂದು ಅಂತರ್‌ಶಿಸ್ತೀಯ ಮತ್ತು ಅಂತರ್ಮುಖೀಯ ಅಧ್ಯಯನ ಕ್ಷೇತ್ರವಾಗಿದೆ. ಸ್ಥಳನಾಮಗಳ ಕುರಿತಾಗಿ ಇಂದಿಗೂ ಕೂಡ ಎಷ್ಟೋ ವಿದ್ಯಾವಂತರು ಅದನ್ನು ಅವಜ್ಞೆಗೆ ಗುರಿಮಾಡುತ್ತಾರೆ. ಮಾನವನ ಮೂಲ ನೆಲೆಯ ವಿಚಾರ ಅಡಗಿರುವುದೇ ಸ್ಥಳನಾಮಗಳಲ್ಲಿ ಎಂದು ಹೇಳಬಹುದು.

ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳಲ್ಲಿ ಪ್ರಮುಖವಾಗಿ ವ್ಯಕ್ತಿನಾಮಗಳು ಯಥೇಚ್ಚವಾಗಿ ಕಂಡುಬರುತ್ತವೆ. ಹಾಗೆಯೇ ಸ್ಥಳನಾಮಗಳಲ್ಲಿ ಕೆರೆ, ಊರು, ವಾರ್ಗಿಕಗಳು ಇದ್ದು ಇವರು ನೀರಾವರಿಗೆ ಒತ್ತುಕೊಟ್ಟಿರುವ ವಿಚಾರ ತಿಳಿಯುತ್ತದೆ. 'ನೀರು ಜೀವನಕ್ಕೆ ಮೂಲಾಧಾರ' ಆದ್ದರಿಂದ ಕೆರೆ, ಕಟ್ಟೆ, ತಟಾಕಗಳು, ಕೊಳ, ಸಮುದ್ರಗಳನ್ನು ನಿರ್ಮಿಸಿದ್ದಾರೆ. ಇದರಿಂದ ಅವರ ಸಾಮಾಜಿಕ ಕೊಡುಗೆಗಳನ್ನು ತಿಳಿಯಬಹುದು.

ಸ್ಥಳನಾಮ ಅಧ್ಯಯನವು ಮಬ್ಬು ಕವಿದ ಹಲವಾರು ಕ್ಷೇತ್ರಗಳಿಗೆ ಹೊಸ ಬೆಳಕಿನ ಪ್ರವಾಹವನ್ನು ಹರಿಸಬಲ್ಲದು. ಅಷ್ಟೇ ಅಲ್ಲ ನಮ್ಮ ಇತಿಹಾಸದ ಕಪ್ಪು ಹಾದಿಯನ್ನು ಬೆಳಗಿಸಬಲ್ಲದು. ಭೌಗೋಳಿಕವಾಗಿ, ಸಮಾಜಶಾಸ್ತ್ರೀಯವಾಗಿ ಹೀಗೆ ನಾಲ್ಕಾರು ಕ್ಷೇತ್ರಗಳಿಗೆ ಕೆಲವೊಮ್ಮೆ ಮೂಲ ಸಾಮಾಗ್ರಿಯನ್ನು ಇನ್ನೂ ಕೆಲವೊಮ್ಮೆ ಪೂರಕ ಸಾಮಾಗ್ರಿಯನ್ನು ಒದಗಿಸಬಲ್ಲದೆಂಬುದರಿಂದ ಸ್ಥಳನಾಮಾಧ್ಯಯನವು ಕ್ಷಿಪ್ರವು ಅನಿವಾರ್ಯವಾಗಿ ನಡೆಯಬೇಕಾಗಿದೆ.

ಸ್ಥಳನಾಮಗಳಲ್ಲಿ ಕಂಡುಬರುವ ದುಷ್ಟಾಂತಗಳ ಆಧಾರದಿಂದ ಕಂಡುಕೊಂಡಿರುವ ಪ್ರಕಾರ ಸ್ಥಳನಾಮವು ಮೂಲತಃ ಭೌಗೋಳಿಕ ಅಂಶ ಅಥವಾ ಘಟಕ ಎನ್ನಬಹುದು. ಸ್ಥಳನಾಮಗಳು ಪ್ರಾರಂಭದಲ್ಲಿ ಪ್ರಕೃತಿಯ ವರ್ಣನಾತ್ಮಕ ನಾಮವಿಶೇಷಣಗಳಾಗಿದ್ದವು. ಅಲ್ಲದೇ ಒಂದು ಕಾಲದಲ್ಲಿ ಮಾನವ ಹಾಗೂ ಪ್ರಕೃತಿ ಈ ಎರಡು ಭಿನ್ನಶಕ್ತಿಗಳ ನಡುವಿನ ಸಂಬಂಧ ಪರಸ್ಪರ ಹೋರಾಟ ಮುಂತಾದವನ್ನು ಸೊಗಸಾಗಿ ನಿರೂಪಿಸುತ್ತವೆ. ನಮ್ಮಲ್ಲಿನ ಸ್ಥಳನಾಮಗಳು ಹೆಚ್ಚಿನವು ಪ್ರಕೃತಿವಾಚಕವಾಗಿರುವುದು ಸಹ ನಮ್ಮ ಜನರ ಪ್ರಕೃತಿನಿಷ್ಟೆಯನ್ನು ಮತ್ತು ಆ ಸಂಬಂಧದ ತೀವ್ರತೆಯನ್ನು ಪ್ರತಿಬಿಂಬಿಸುತ್ತದೆ.

ಯಾವ ಕಾಲದ ಯಾವ ಶಾಸನದಲ್ಲಿ ಯಾವ ಸ್ಥಳಗಳು ಉಲ್ಲೇಖಿತಗೊಂಡಿವೆ ಎಂಬುವುದರ ವಿಸ್ತೃತ ಅಧ್ಯಯನ ಇಲ್ಲಿದೆ. ಶಾಸನೋಕ್ತ ಸ್ಥಳನಾಮಗಳ ಭಾಷಿಕ ವಿಶ್ಲೇಷಣೆಯು ಶಾಸನ

ರಚಿತವಾದಕಾಲದ ಭಾಷಿಕ ಸ್ಥಿತಿಯನ್ನು ಭಾಷಾ ಬೆಳವಣಿಗೆಯನ್ನು ಇದು ದಾಖಲಿಸಿದಂತಾಗಿದೆ. ಈ ಅಧ್ಯಯನದ ಫಲಶೃತಿಯೆಂದರೆ ಭಾಷೆಯೊಂದರಲ್ಲಿ ಸಂಭವಿಸುವ ಬಗೆ ಬಗೆಯ ಧ್ವನಿ ವ್ಯತ್ಯಾಸಗಳು ಸ್ಥಳನಾಮಗಳಲ್ಲಿ ಕಂಡುಬಂದರೂ ಅವುಗಳ ಒಂದು ಸಾಮಾನ್ಯ ಸೂತ್ರಕ್ಕಾಗಲೀ ಚೌಕಟ್ಟಿಗಾಗಲೀ ಒಳಪಡಿಸುವುದು ಕಷ್ಟಸಾಧ್ಯವೆಂಬ ನಿರ್ಧಾರಕ್ಕೆ ಬರುವುದು ಅನಿವಾರ್ಯವಾಗುತ್ತದೆ.

ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳ ವರ್ಗೀಕರಣವು ಜಗತ್ತಿನ ಯಾವುದೋ ಒಂದು ಪ್ರದೇಶಕ್ಕೆ ಅನ್ವಯಿಸುವಂತಿರದೇ ಅಥವಾ ಸೀಮಿತವಾಗಿರದೇ ಜಗತ್ತಿನ ಯಾವುದೇ ಪ್ರದೇಶದ ಸ್ಥಳನಾಮಗಳಿಗೂ ಅನ್ವಯವಾಗುವ ಮಾನ್ಯತೆಯನ್ನು ಪಡೆದಿದೆ. ಪ್ರಚಲಿತ ವರ್ಗೀಕರಣವು ಯಾವ ಯಾವ ಮೂಲದಿಂದ ಹುಟ್ಟಲು ಸಾಧ್ಯವೆಂಬ ಸ್ಥೂಲಚಿತ್ರಣ ದೊರಕಿದಂತಾಗಿದೆ.

ಸ್ಥಳನಾಮಗಳ ಘಟಕಗಳಾದ ವಾರ್ಗಿಕಗಳ ಆವರ್ತನ ಕ್ರಿಯೆಯನ್ನು ನಡೆಸಲಾಗಿದ್ದು, ಅಚ್ಚ ಕನ್ನಡದ ವಾರ್ಗಿಕಗಳೇ ಇಲ್ಲಿ ವಿಜೃಂಬಿಸಿದ್ದು ಆ ಕಾಲದಲ್ಲಿ ಈ ಸೀಮೆ ಅಚ್ಚ ಕನ್ನಡದ ಪ್ರದೇಶವಾಗಿತ್ತೆಂಬುದು ಸಾಬೀತಾಗಿರುವುದಲ್ಲದೇ ಅನ್ಯ ಭಾಷಾ ಪ್ರಭಾವ ನಗಣ್ಯ ಎನಿಸುವಷ್ಟರ ಮಟ್ಟಿಗೆ ಇದು ದೃಡಪಡುತ್ತದೆ.

ಪುರ, ಸಾಗರ, ಸಮುದ್ರ ಎಂಬ ಮೂರು ಅನ್ಯ ದೇಶೀಯ ವಾರ್ಗಿಕಗಳು ಶಾಸನೋಕ್ತ ಸ್ಥಳನಾಮಗಳಲ್ಲಿ ಕಂಡುಬಂದರೂ ಅವು ದೇಶೀಯ ಸ್ಥಳನಾಮಗಳನ್ನು ಪುನರ್‌ನಾಮಕರಣಗೊಳಿಸಿದ ಸಂದರ್ಭದಲ್ಲಿ ಬಂದವೆಂಬುದು ಅಧ್ಯಯನದಿಂದ ಹೊರಹೊಮ್ಮಿದ ಸತ್ಯವಾಗಿದೆ. ಮೂಲದಲ್ಲಿ ಅವು ದೇಶೀಯ ವಾರ್ಗಿಕಗಳನ್ನು ಹೊಂದಿದ್ದವೆಂಬುದು ಭಾವಿಸಿರುವುದು ಊಹಾತ್ಮಕವಾಗಿರದೇ ಸತ್ಯವೇ ಆಗಿದೆ. ನೆಲೆ ಎಂಬರ್ಥವನ್ನು ಕೊಡುವ ವಾರ್ಗಿಕಗಳು ಎಂದ ತಕ್ಷಣ ಹಳ್ಳಿ, ಊರು, ನಾಡು, ಸೀಮೆ, ಹಟ್ಟಿ, ಕೇರಿ ಎಂಬ ಸೀಮಿತ ಸಂಖ್ಯೆಯ ವಾರ್ಗಿಕಗಳು ಮಾತ್ರ ನಮ್ಮ ಸ್ಮೃತಿ ಪಟಲದಲ್ಲಿ ಹಾದುಹೋಗುವ ನಮ್ಮ ದಿನಮಾನಗಳಲ್ಲಿ ಅಂದಿನ ಕಾಲದಲ್ಲಿದ್ದ ವೈವಿದ್ಯಮಯ ವಾರ್ಗಿಕವನ್ನು ಗಮನಿಸಿದಾಗ ಕನ್ನಡ ಭಾಷೆಯ ಶ್ರೀಮಂತಿಕೆಯ ಮುಖವನ್ನು ನಾವು ಪರಿಗಣಿಸಬೇಕಾಗುತ್ತದೆ.

ಶಾಸನೋಕ್ತ ಸ್ಥಳನಾಮದ ಪ್ರಾಚೀನ ಮತ್ತು ಪ್ರಸ್ತುತ ರೂಪವನ್ನಾಧರಿಸಿ ನಿಷ್ಪತ್ತಿ ನಿರ್ಣಯ ಮಾಡಲಾಗಿದ್ದು ಒಂದು ಸ್ಥಳನಾಮಕ್ಕೆ ಒಂದೇ ನಿಷ್ಪತ್ತಿಯನ್ನು ದಾಖಲಿಸಲಾಗಿದೆ. ಅನಿವಾರ್ಯವೆನಿಸಿದ ಕಡೆ ಮಾತ್ರ ಒಂದಕ್ಕಿಂತ ಹೆಚ್ಚು ನಿಷ್ಪತ್ತಿಗಳನ್ನು ಮಾಡಲಾಗಿದೆ. ಕೆಲವು ಸ್ಥಳನಾಮಗಳು ಯಾವುದೋ ಕಾರಣಕ್ಕಾಗಿ ಪುನರ್ ನಾಮಕರಣಗೊಂಡಿದ್ದು, ಅಂತಹ ಸ್ಥಳನಾಮಗಳನ್ನು ನಿಷ್ಪತ್ತಿಗೊಳಿಸುವಾಗ ಪೂರ್ವದಲ್ಲಿದ್ದ ಹೆಸರು ಮತ್ತು ಪುನರ್‌ನಾಮಕರಣಗೊಂಡ ಹೆಸರು ಇವೆರಡರ ನಿಷ್ಪತ್ತಿಯನ್ನು ದಾಖಲಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಸ್ಥಳನಾಮ ಘಟಕಗಳ ಅರ್ಥ, ನಿಷ್ಪತ್ತಿ ಇವುಗಳಿಗಷ್ಟೇ ಪ್ರಾಮುಖ್ಯತೆಯನ್ನು ನೀಡಲಾಗಿದೆ. ತಾಲ್ಲೂಕು ಕೇಂದ್ರದಿಂದ ಇರುವ ದೂರ, ಭೂಸಾರ, ಬೆಳೆಗಳು ಇತರೆ ವಿವರಗಳ ಕಡೆ ಗಮನಹರಿಸಬೇಕಾಗಿಲ್ಲ.

ಸ್ಥಳನಾಮಗಳ ಭಾಷಿಕ ವಿಶ್ಲೇಷಣೆಯಲ್ಲಿ ವ್ಯಾಕರಣಾತ್ಮಕ ವಿಚಾರಗಳಿಂದ ಸಂಧಿ, ಭಾಷಾಶಾಸ್ತ್ರಕ್ಕೆ ಸಂಬಂಧಿಸಿದಂತೆ ಸದೃಶ್ಯಾಕ್ಷರಲೋಪ, ಸೌಲಭ್ಯಕಾಂಕ್ಷೆ, ಸಂಸ್ಕೃತೀಕರಣ ಮುಂತಾದವುಗಳು ಸ್ಥಳನಾಮಗಳಲ್ಲಿ ಕಾಣದಿರುವುದನ್ನು ಉದಾಹರಣೆಗಳ ಸಹಿತ ದಾಖಲಿಸಲಾಗಿದೆ. ಶಾಸನಗಳಲ್ಲಿ ಭಾಷೆಯು ಯಾವ ನೆಲೆಯಲ್ಲಿ ಬೆಳೆದುಕೊಂಡು ಬಂದಿದೆಂಬುದನ್ನು ಗುರುತಿಸುವಲ್ಲಿ ಈ ಅಧ್ಯಯನವು ಸಹಾಯಕವಾಗಿದೆ.

ಪ್ರಸ್ತುತ ಆಧುನಿಕ ಕಾಲದ ಮನುಷ್ಯನು ನಿತ್ಯ ಜೀವನದ ಜಂಜಾಟದಲ್ಲಿ ಇಂದಿನ ಆಧುನಿಕ ಯುಗದಲ್ಲಿ ನಮ್ಮ ಬಗೆಗೆ ನಾವು ಯೋಚನೆ ಮಾಡಲು ಸಮಯವಿಲ್ಲದಷ್ಟು ಒತ್ತಡಕ್ಕೆ ಸಿಲುಕಿದ್ದಾನೆ. ಹೀಗಿದ್ದ ಮೇಲೆ ಸ್ಥಳನಾಮಗಳ ಬಗ್ಗೆ ವಿಚಾರ ಮಾಡುವ ಮನಸ್ಸು ತಾನೇ ಎಲ್ಲಿಂದ ಬರುತ್ತದೆ. ಮಾನವನ ಭಾವನೆಗಳೆಲ್ಲವೂ ಯಾಂತ್ರಿಕೃತವಾಗಿವೆ. ಆದ್ದರಿಂದ ಪ್ರಜ್ಞಾವಂತ ಮಾನವನು ವಿಚಾರ ಮಾಡಬೇಕಾಗಿದೆ. ಮೊದಲು ತನ್ನ ಸುತ್ತಮುತ್ತಲಿನ ಪರಿಸರದ ಬಗೆಗೆ ಕಾಳಜಿ ವಹಿಸಬೇಕು. ಸ್ಥಳನಾಮ ಅಧ್ಯಯನ ಕ್ಷೇತ್ರದ ಬಗೆಗೆ ಎಚ್ಚೆತ್ತುಕೊಂಡು ಅಧ್ಯಯನ ಕೈಗೊಂಡು ಸಂಶೋಧನೆ ನಡೆಸಿದ್ದೇ ಆದರೆ ಸ್ಥಳನಾಮ ಅಧ್ಯಯನ ಕ್ಷೇತ್ರವು ಇತಿಹಾಸದ ಮೇಲೆ ಮಹತ್ವಪೂರ್ಣವಾದ ಬೆಳಕನ್ನು ಚೆಲ್ಲುತ್ತದೆ.

ಮೊಳಕಾಲ್ಮೂರು ತಾಲ್ಲೂಕಿನ ಸ್ಥಳನಾಮಗಳು ಅನೇಕ ಐತಿಹ್ಯ, ಸ್ಥಳಪುರಾಣ, ಇತಿಹಾಸವನ್ನು ತನ್ನ ಒಡಲಲ್ಲಿ ಇರಿಸಿಕೊಂಡಿದೆ. ಆದ್ದರಿಂದ ಹೆಚ್ಚು ಅಧ್ಯಯನ ಕೈಗೊಂಡರೆ ಅವುಗಳ ಪ್ರಾಮುಖ್ಯತೆಯನ್ನು ಉಳಿಸುವಲ್ಲಿ ನಾವು ಪ್ರಮುಖ ಪಾತ್ರವಹಿಸಿದಂತಾಗುತ್ತದೆ. ಸ್ಥಳನಾಮ ಅಧ್ಯಯನ ಕ್ಷೇತ್ರವು ಚಿನ್ನದ ಗಣಿಯಾಗಿದೆ. ಒಂದೊಂದು ಸ್ಥಳನಾಮದ ಹಿಂದೆ ಒಂದೊಂದು ಇತಿಹಾಸ ಸೃಷ್ಟಿಯಾಗುತ್ತದೆ. ಅದನ್ನು ನಾವು ಹೆಕ್ಕಿ ಹೆಕ್ಕಿ ತೆಗೆದಷ್ಟು ಅದು ಶುಭ್ರವಾಗಿ ಹೊಳೆಯುತ್ತದೆ. ಹಲವಾರು ಮಾಹಿತಿಗಳು ಇತಿಹಾಸವನ್ನು ಪುನರ್‌ಪರಿಶೀಲಿಸುವ, ವಿಮರ್ಶಿಸುವ, ಪುನರ್ ವ್ಯಾಖ್ಯಾನಗೊಳಿಸುವ, ವಿಷಯವಾಗಿ ಮಾರ್ಪಡುತ್ತದೆ. ಒಂದೊಂದು ಸ್ಥಳನಾಮದ ಹಿಂದೆ, ಒಂದೊಂದು ಸಂಪ್ರದಾಯ, ಸಂಸ್ಕೃತಿ, ಆಚರಣೆ, ಬುದ್ಧಿವಂತಿಕೆ, ಪರಿಸರ ಹಾಗೂ ಪಕ್ಷಿಗಳ ಪ್ರಭಾವವಿದೆ. ಬೆಟ್ಟ, ಗುಡ್ಡ, ಗಿಡ, ಮರ, ಪ್ರತಿಯೊಂದು ಕೂಡ ತನ್ನದೇ ಆದ ಸ್ಥಾನಮಾನವನ್ನು ಉಳಿಸಿಕೊಂಡು ಬೆಳೆದುಬಂದಿರುವುದು ತಿಳಿಯುತ್ತದೆ. ಮೊಳಕಾಲ್ಮೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳನ್ನು, ಸಾಮಾಜಿಕವಾಗಿ, ರಾಜಕೀಯವಾಗಿ, ಚಾರಿತ್ರಿಕವಾಗಿ, ಜಾನಪದೀಯವಾಗಿ, ಐತಿಹಾಸಿಕವಾಗಿ ಅಧ್ಯಯನ ಮಾಡಲು ಅವಕಾಶಗಳಿವೆ.

ನಮ್ಮ ಪೂರ್ವಜರು ಪ್ರಕೃತಿಯನ್ನು ಪೂಜಿಸಿ ಆರಾಧಿಸುತ್ತಿದ್ದರು. ಅದು ಇಂದಿಗೂ ಕೂಡ ಪ್ರಸ್ತುತವಾಗುತ್ತದೆ. ಪ್ರಕೃತಿ ಮುನಿಸುಕೊಂಡರೆ ಮನುಕುಲ ಉಳಿಯಲಾರದು, 'ಪ್ರಕೃತಿಯಿಂದ ನಾವು ನಮ್ಮಿಂದ ಪ್ರಕೃತಿಯಲ್ಲ' ಎನ್ನುವ ಮಾತು ಸತ್ಯವಾದುದು. ನಾವಿಂದು ನಿಸರ್ಗವನ್ನು ಹಾಳು ಮಾಡುತ್ತಿದ್ದೇವೆ. ಅದು ಸಲ್ಲದು. ಸ್ಥಳನಾಮಗಳ ಅಧ್ಯಯನದಿಂದ ಪ್ರಕೃತಿಯ ನಿಗೂಢತೆಯು ಅರಿವಾಗುತ್ತದೆ.

ಸ್ಥಳನಾಮ ಅಧ್ಯಯನ ಕ್ಷೇತ್ರವು ಸೀಮಿತ ವ್ಯಾಪ್ತಿಯನ್ನು ಹೊಂದಿಲ್ಲ. ಅದರ ವ್ಯಾಪ್ತಿ ವಿಶಾಲವಾದುದು. ಲಭ್ಯವಿರುವ ಎಲ್ಲಾ ನೆಲೆಗಳಲ್ಲಿ ಸ್ಥಳನಾಮಗಳನ್ನು ಪರಿಶೀಲಿಸುವ, ವಿಮರ್ಶಿಸುವ, ವ್ಯಾಖ್ಯಾನಿಸುವ ಕಾರ್ಯವೈಖರಿಯನ್ನು ಕೈಗೊಂಡರೆ ಸ್ಥಳನಾಮ ಅಧ್ಯಯನವು ವಿವಿಧ ಕ್ಷೇತ್ರಗಳ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ.



## ಆಕರ ಗ್ರಂಥಗಳು

* ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೫, ಕರ್ನಾಟಕ, ಗ್ರಾಮಸೂಚಿ, ಬೆಂಗಳೂರು.
* ಕಲಬುರ್ಗಿ ಎಂ.ಎಂ., ೧೯೯೮, ಮಾರ್ಗ ಸಂ-೨, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು.
* ಕಲಬುರ್ಗಿ ಎಂ.ಎಂ., ೧೯೮೯, ಕನ್ನಡ ನಾಮವಿಜ್ಞಾನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.
* ಗಿರಿಜಾ ಟಿ., ೧೯೯೧, ಚಿತ್ರದುರ್ಗ ಜಿಲ್ಲಾದರ್ಶನ, ರೇಖಾ ಪ್ರಕಾಶನ, ದಾವಣಗೆರೆ.
* ಗೋಪಾಲಕೃಷ್ಣ ವಿ., ೧೯೮೭, ಸ್ಥಳನಾಮ ಅಧ್ಯಯನಗಳು, ವಿದ್ಯಾಗಿರಿ ಪ್ರಕಾಶನ, ಕೋಲಾರ.
* ಜವರೇಗೌಡ ದೇ., ೧೯೯೦, ಸ್ಥಳನಾಮ ವ್ಯಾಸಂಗ, ಸಹ್ಯಾದ್ರಿ ಪ್ರಕಾಶನ, ಮೈಸೂರು.
* ನಾಗಾಚಾರಿ ಎಸ್., ೨೦೦೯, ನಾಮಸಂಪದ, ಸೋನಾ ಪ್ರಕಾಶನ, ಮೈಸೂರು.
* ನಾರಾಯಣ ಕೆ.ವಿ., ೨೦೦೦, ವ್ಯಕ್ತಿನಾಮಗಳು ಸ್ವರೂಪ ಮತ್ತು ವಿಶ್ಲೇಷಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ಭೀಮಾರೆಡ್ಡಿ ಕೆ.ಎನ್., ೧೯೮೭, ಮೊಳಕಾಲ್ಮೂರು ತಾಲ್ಲೂಕುದರ್ಶನ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.
* ಮೈಲಾರಪ್ಪ ಬಿ., ೨೦೦೨, ಮೊಳಕಾಲ್ಮೂರು ತಾಲ್ಲೂಕಿನ ಸ್ಥಳನಾಮಗಳು, ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ.
* ರಘುಪತಿಭಟ್ಟ ಕೆಮ್ತೂರು, ೧೯೮೧, ತುಳುನಾಡಿನ ಸ್ಥಳನಾಮಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
* ವಿಶ್ವನಾಥ, ೧೯೯೬, ಸಕಲೇಷಪುರ ಪರಿಸರದ ಸ್ಥಳನಾಮಗಳು, ದೇವಿ ಪ್ರಕಾಶನ, ಮೈಸೂರು.

* ವಿಶ್ವನಾಥಯ್ಯ ಸಿ.ಎಂ., ೨೦೦೪, ಕಡೂರು ತಾಲ್ಲೂಕಿನ ಸ್ಥಳನಾಮಗಳು, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

* Rice B.L., 1903, Epigraphia Comatica, Vol-XI, ಚಿತ್ರದುರ್ಗ ಜಿಲ್ಲೆ.

**ಸಂಶೋಧನಾ ಲೇಖನಗಳು**

* ಕರ್ನಾಟಕ ಇತಿಹಾಸ ಅಕಾಡೆಮಿ, ೧೯೯೮, ಇತಿಹಾಸ ದರ್ಶನ ಸಂಪುಟಗಳು, ಬೆಂಗಳೂರು.

* ಗಿರಿಜ ಟಿ., ೨೦೦೦, ದಾವಣಗೆರೆ ಸ್ಥಳನಾಮದ ಬಗ್ಗೆ ಒಂದು ಸಮೀಕ್ಷೆ, ಸಂಪುಟ–೧೫.

* ವಿಶ್ವನಾಥ್ ಜಿ., ಸಾಸಲು ಪ್ರದೇಶದ ಸ್ಥಳನಾಮಗಳು, ಸಂಪುಟ–೧೬.

**ಕನ್ನಡ ನಿಘಂಟುಗಳು**

* ಸಂಕ್ಷಿಪ್ತ ಕನ್ನಡ ನಿಘಂಟು, ೧೯೭೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

* ಕನ್ನಡ ರತ್ನಕೋಶ, ೧೯೮೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.



# MOLAKALMUR TALUK GP MAP




Prepared by : NRDMS Centre
ZP office, Chitradurga

